# ಶಂಕರಭಾಸ್ಕರ

## ಆಧ್ಯಾತ್ಮಿಕತ್ರೈಮಾಸಿಕಪತ್ರಿಕಾ

ಸಂಪುಟ 1 ಅಕ್ಟೋಬರ್, ನವೆಂಬರ್, ಡಿಸೆಂಬರ್ – 2004 ಸಂಚಿಕೆ 4





ನಮಾಮಿ ಶಿರಸಾ ದೇವೀಂ ಶುಭ್ರವಸ್ತ್ರಾಂ ಸರಸ್ವತೀಮ್

# ಶಂಕರಭಾಸ್ಕರ

## ಆಧ್ಯಾತ್ಮಿಕ ತ್ರೈಮಾಸಿಕ ಪತ್ರಿಕಾ

**ಸ ಯೋ ಹ ವೈ ತತ್ ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ**

ಮುಂಡಕೋಪನಿಷತ್ ೩-೨-೯

### "ಶಂಕರಭಾಸ್ಕರ"ಕ್ಕೆ ಚಂದಾ ವಿವರಗಳು:

| | |
|---|---|
| A. ಪರಿಪಾಲಕರಿಗೆ | ರೂ. 5001-00 |
| B. ಆಶ್ರಯದಾತರಿಗೆ | ರೂ. 1001-00 |
| C. ದಾನಿಗಳಿಗೆ (10 ವರ್ಷ) | ರೂ. 501-00 |
| ವಾರ್ಷಿಕ ಚಂದಾ | ರೂ. 50-00 |
| ವಿದೇಶಗಳಿಗೆ | U.S.A. 50 ಡಾಲರ್‌ಗಳು |

ಹಿಂದಿನ ಸಂಪುಟಗಳು (ರಟ್ಟಿನ ಬೈಂಡ್‌ನಲ್ಲಿ) ರೂ. 50/-
ಬಿಡಿ ಸಂಚಿಕೆ ರೂ. 10/-; ರಕ್ಷಾಪುಟ ಚಿತ್ರ ರೂ. 3/- } (ಅಂಚೆವೆಚ್ಚ ಪ್ರತ್ಯೇಕ)

### ಸಂಪಾದಕ ಮಂಡಳಿ:

ವೇದಾಂತಸಾಗರ, ವೇದಾಂತರಾಜಹಂಸ, ಅದ್ವೈತಜ್ಞಾನತೇಜ, ಅದ್ವೈತಸಾರತಿಲಕ

ವೇ॥ ಬ್ರ॥ ಶ್ರೀ ಕೆ. ಜಿ. ಸುಬ್ರಾಯಶರ್ಮಾ, ಪ್ರಧಾನ ಸಂಪಾದಕರು

ಶ್ರೀ ಡಿ. ಗಣಪತಿ ಶಾಸ್ತ್ರಿಗಳು ಮತ್ತು ಕಾರ್ಯದರ್ಶಿಗಳು

**ಪ್ರಾರ್ಥನೆ: ದಯಮಾಡಿ ಈ ಕೆಳಗಿನ ಅಂಶಗಳಿಗೆ ಗಮನ ಕೊಡಿ**

ಎಷ್ಟು ಬಾರಿ ಗಮನ ಸೆಳೆದು ಪ್ರಾರ್ಥಿಸಿದರೂ ಕೆಲವಂಶಗಳು ಹಾಗೇ ಉಳಿದು, ಕಾರ್ಯ ವ್ಯವಸ್ಥೆಯಲ್ಲಿ ತೊಡಕಾಗುತ್ತದೆ. ಅದಕ್ಕಾಗಿ ಪುನರಪಿ ಈ ವಿನಂತಿ.

1. ಎಂ.ಓ. ಸಂದೇಶ ಸ್ಥಳ ಬರಿದಾಗಿ ಉಳಿದು ಬರುತ್ತದೆ. ದಯವಿಟ್ಟು ನಿಮ್ಮ ವಿಳಾಸ, M.No., ಕಾಣಿಕೆಯ ಉದ್ದೇಶವನ್ನು ಸ್ಪಷ್ಟವಾಗಿ ದಪ್ಪಕ್ಷರಗಳಲ್ಲಿ ಬರೆಯಿರಿ.
2. ಎಂ.ಓ., ಡಿ.ಡಿ., ಚೆಕ್ (ಬೆಂಗಳೂರು ನಗರದ್ದು ಮಾತ್ರ) ಮತ್ತು ಪತ್ರಗಳನ್ನು "ಅಧ್ಯಾತ್ಮಪ್ರಕಾಶಕಾರ್ಯಾಲಯ"ದ ಹೆಸರಿಗೇ ಬರೆಯಿರಿ, ವೈಯಕ್ತಿಕ ಹೆಸರು ಬೇಡ.
3. ವಿಳಾಸ ಬದಲಾವಣೆಯಾದಾಗ ನಿಮ್ಮ M.No., ಹಳೆಯ ವಿಳಾಸ, ಬದಲಾದ ವಿಳಾಸವನ್ನು ನಮೂದಿಸಿ.
4. ಸಾಧ್ಯವಾದಷ್ಟು ಯಾವುದೇ ವಿಷಯದಲ್ಲಾದರೂ ಅಂಚೆ ಕಾರ್ಡ್ ಬರೆದರೆ ಸಾಕು, ಅದಕ್ಕೆ ಎಲ್ಲ ಗಮನವನ್ನೂ ಕೊಡುತ್ತದೆ. ತುಂಬಾ ಅನಿವಾರ್ಯವಾದಾಗ ಮಾತ್ರವೇ ಫೋನ್ ಉಪಯೋಗಿಸಿ, ಸಂಜೆ 4 ರಿಂದ 6 ರವರೆಗೆ.
5. ಡಿ. ಶ್ರೇಣಿಯಲ್ಲಿ ಹೆಚ್ಚುವರಿ ಬಾರದಿರುವವರ ಸಂಖ್ಯೆ ಈಗ 8000. ಅವರೆಲ್ಲರೂ ದಯಮಾಡಿ ಈ ವಿನಂತಿಯ ಕರೆಗೆ ಸಹಾನುಭೂತಿಯಿಂದ ಸ್ಪಂದಿಸುವರೆಂದು ಆಶಿಸಿದೆ. ಒಂದೇ ಬಾರಿಗೆ ಎಂದಲ್ಲದಿದ್ದರೂ ಆಗಷ್ಟು ಈಗಷ್ಟೆಂದು ಕಳಿಸಿದರೂ ಆದೀತು. ಹಾಗೆಯೇ, ಉಳಿದ ಶ್ರೇಣಿಯವರಿಂದಲೂ ಅಲ್ಪ ಸಹಾಯ ಬಂದರೂ ಉಪಕಾರವೇ ಆಗುತ್ತದೆ.

# ಶಂಕರಭಾಸ್ಕರ

## ಆಧ್ಯಾತ್ಮಿಕತ್ರೈಮಾಸಿಕಪತ್ರಿಕಾ

ಸ ಯೋ ಹ ವೈ ತತ್ ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ

ಸಂಪುಟ 17 ಅಕ್ಟೋಬರ್, ನವೆಂಬರ್, ಡಿಸೆಂಬರ್ — 2004 ಸಂಚಿಕೆ 4

ಶ್ರೀ 'ತಾರಣ'ನಾಮಸಂವತ್ಸರದ ಆಶ್ವೀಜ, ಕಾರ್ತಿಕ, ಮಾರ್ಗಶಿರ ಮಾಸಗಳು

## 'ಶಂಕರಭಾಸ್ಕರ' ಅಂತರಂಗ

ಸಂಪಾದಕೀಯ

# ದೇವರು ಯಾರು?

'ದೇವರು' ಎಂದಕೂಡಲೇ ನಮ್ಮೆಲ್ಲರ ಮನಸ್ಸಿನಲ್ಲಿ ಧಿಡೀರ್ ಎಂದು ಬರುವ ಕಲ್ಪನೆ, ಅವನೊಬ್ಬ ದೊಡ್ಡವ್ಯಕ್ತಿ, ಅವನು ಎಲ್ಲೋ ತುಂಬಾ ದೂರದಲ್ಲಿರುವ ಒಬ್ಬ ಸರ್ವಶಕ್ತನಾದ ದೇವತೆಯೆಂದು. ದೇವರ ಬಗ್ಗೆ ಅವರವರಿಗೆ ತೋಚಿದಂತೆ, ಅವರವರ ತಾಕತ್ತಿಗೆ ತಕ್ಕಂತೆ ನಾನಾ ಭಕ್ತರು ಕಲ್ಪಿಸಿರುತ್ತಾರೆ. ಆಯಾ ದೇವರುಗಳ ಆರಾಧನೆಗಳಿಂದ ಇಷ್ಟ ಫಲಗಳನ್ನೂ ಹೊಂದುತ್ತಾರೆ. ಈ ದೇವರನ್ನು ಲೌಕಿಕಜನಗಳ ದೇವರು, ವೈದಿಕರ ದೇವರು, ಪೌರಾಣಿಕ ದೇವರು ಮತ್ತು ಔಪನಿಷದ ದೇವರು ಎಂದು ಸಾಮಾನ್ಯವಾಗಿ ನಾಲ್ಕು ಭಾಗಗಳಾಗಿ ವಿಂಗಡಿಸಬಹುದು.

೧. ಲೌಕಿಕ ದೇವರೆಂದರೆ ವಿಗ್ರಹಗಳು. ಗಣೇಶ, ಈಶ್ವರ, ಕೃಷ್ಣ, ವೆಂಕಟೇಶ ಮುಂತಾದ ವಿಗ್ರಹಗಳನ್ನು ದೇವರೆಂದು ತಿಳಿದು ಇವರು ಆರಾಧಿಸಿ ತಮ್ಮ ಇಷ್ಟಫಲ ಗಳನ್ನು ಹೊಂದುತ್ತಾರೆ. ದೇವಸ್ಥಾನಕ್ಕೆ ಹೋದಾಗ ಅವರಿಗೆ ವಿಗ್ರಹಗಳೇ ದೇವರು. ಗರ್ಭಗುಡಿಯೊಳಗಿರುವ ವಿಗ್ರಹಗಳಷ್ಟೇ ಅವರ ಪಾಲಿಗೆ ದೇವರುಗಳು.

೨. ವೇದಾಧ್ಯಯನಮಾಡಿ ಅಗ್ನಿಹೋತ್ರಾನುಷ್ಠಾನವನ್ನು ಮಾಡುವ ವೈದಿಕರಿಗೆ ದೇವರೆಂದರೆ ಅಗ್ನಿಯು. ಅಗ್ನಿಯ ಆರಾಧನೆಯೇ ಅವರಿಗೆ ದೇವಪೂಜೆ. ಅಗ್ನಿಯಲ್ಲಿ ಆಹುತಿಯಾಗಿ ಸಮರ್ಪಿಸಿದ ವಸ್ತುಗಳೇ ನೈವೇದ್ಯ. ಅಗ್ನಿ ಪೂಜೆಯಿಂದ ತೃಪ್ತಿ.

೩. ಪೌರಾಣಿಕ ದೇವರೆಂದರೆ ಸಾಕಾರರಾದ, ಸಗುಣರಾದ ಸರ್ವಜ್ಞ ಸರ್ವ ಶಕ್ತರಾದ ಇಂದ್ರ, ಆದಿತ್ಯ, ವಿಷ್ಣು, ಈಶ್ವರ, ಬ್ರಹ್ಮಾ ಮುಂತಾದವರು. ಈ ದೇವರುಗಳಿಗೆ ಸಂಸಾರವಿರುತ್ತದೆ. ಇವರಿಗೆ ಪತ್ನಿ, ಪುತ್ರ, ಗೃಹ, ವಾಹನ, ಆಯುಧ, ಆಕಾರ, ಎಲ್ಲವೂ ಇರುತ್ತವೆ. ಇದಕ್ಕೆಲ್ಲ ಪುರಾಣಗಳೇ ಪ್ರಮಾಣಗಳು.

೪. ಆದರೆ ಉಪನಿಷತ್ತುಗಳಲ್ಲಿ ಪ್ರತಿಪಾದಿತನಾಗಿರುವ ಔಪನಿಷದ ದೇವ ನೆಂದರೆ ಸಚ್ಚಿದಾನಂದ ತತ್ತ್ವವು. ಈ ದೇವನು ಗಂಡಲ್ಲ, ಹೆಣ್ಣಲ್ಲ; ಇವನಿಗೆ ಶರೀರ ವಿಲ್ಲ, ಕೈಕಾಲುಗಳೂ ಇಲ್ಲ. ಈ ದೇವನೇ ಎಲ್ಲವೂ ಆಗಿರುತ್ತಾನೆ. ಉಪನಿಷತ್ತುಗಳಲ್ಲಿ ತಿಳಿಸಿರುವ ದೇವನೇ ಈ ವಿಶ್ವವಾಗಿ ತೋರುತ್ತಿದ್ದಾನೆ. ಇವನಲ್ಲದ ವಸ್ತುವೇ ಇರುವುದಿಲ್ಲ. ಬ್ರಹ್ಮೈವೇದಂ ವಿಶ್ವಂ, ಈಶಾವಾಸ್ಯಮಿದಂ ಸರ್ವಮ್.

ಅಗ್ನಿರ್ದೇವೋ ದ್ವಿಜಾತೀನಾಂ ಮುನೀನಾಂ ಹೃದಿ ದೈವತಮ್।
ಪ್ರತಿಮಾಸ್ವಲ್ಪಬುದ್ಧೀನಾಂ ಸರ್ವತ್ರ ಸಮದರ್ಶಿನಾಮ್॥

ನಾವು ಸಮದರ್ಶಿಗಳಾಗಿ ವಿಶ್ವವನ್ನೇ ದೇವರನ್ನಾಗಿ ಕಾಣೋಣವೆ?

ತಾರೀಖು: ೧-೧೦-೨೦೦೪

ಕೆ. ಜಿ. ಸುಬ್ರಾಯಶರ್ಮಾ

# ವಿಷ್ಣುಸ್ತುತ ದೇವೀಸ್ತೋತ್ರ
## ದೇವೀಭಾಗವತದಿಂದ

**ನಮೋ ದೇವ್ಯೈ ಪ್ರಕೃತ್ಯೈ ಚ ವಿಧಾತ್ರ್ಯೈ ಸತತಂ ನಮಃ।**
**ಕಲ್ಯಾಣ್ಯೈ ಕಾಮದಾಯೈ ಚ ವೃದ್ಧ್ಯೈ ಸಿದ್ಧ್ಯೈ ನಮೋ ನಮಃ॥**

ಪ್ರಪಂಚಕ್ಕೆಲ್ಲ ಮೂಲಕಾರಣಳಾದ ದೇವಿಗೆ ನಮಸ್ಕಾರವು. ಪ್ರಪಂಚವನ್ನು ಸೃಷ್ಟಿಸುತ್ತಲೂ, ಕಾಪಾಡುತ್ತಲೂ ಇರುವ ದೇವಿಗೆ ನಮಸ್ಕಾರವು. ಮಂಗಳರೂಪಳಾದ, ಇಷ್ಟಾರ್ಥಗಳನ್ನು ಕೊಡುವ ವೃದ್ಧಿ, ಸಿದ್ಧಿರೂಪಳಾದ ದೇವಿಗೆ ನಮಸ್ಕಾರವು.

**ಸಚ್ಚಿದಾನಂದರೂಪಿಣ್ಯೈ ಸಂಸಾರಾರಣಯೇ ನಮಃ।**
**ಪಂಚಕೃತ್ಯ ವಿಧಾತ್ರ್ಯೈ ತೇ ಭುವನೇಶ್ಯೈ ನಮೋ ನಮಃ॥**

ಸಚ್ಚಿದಾನಂದಸ್ವರೂಪಳೂ, ಸಂಸಾರಕ್ಕೆ ಕಾರಣ ಸ್ವರೂಪಳೂ ಆದ ನಿನಗೆ ನಮಸ್ಕಾರ, ಸೃಷ್ಟಿ, ಸ್ಥಿತಿ, ಸಂಹಾರ, ತಿರೋಭಾವ (ಅಂತರ್ಧಾನ) ಮತ್ತು ಅನುಗ್ರಹಗಳೆಂಬ ಐದು ಬಗೆಯ ಕಾರ್ಯಗಳನ್ನು ಮಾಡುವ, ಪ್ರಪಂಚಕ್ಕೆ ಒಡೆಯಳಾದ ನಿನಗೆ ನಮಸ್ಕಾರವು.

**ಸರ್ವಾಧಿಷ್ಠಾನರೂಪಾಯೈ ಕೂಟಸ್ಥಾಯೈ ನಮೋ ನಮಃ।**
**ಅರ್ಧಮಾತ್ರಾರ್ಥಭೂತಾಯೈ ಹೃಲ್ಲೇಖಾಯೈ ನಮೋ ನಮಃ॥**

ಎಲ್ಲ ಪ್ರಪಂಚದ ತೋರಿಕೆಗಳಿಗೂ ಆಧಾರಭೂತಳಾದ, ಕೂಟಸ್ಥದಂತೆ ಎಂದರೆ ಅಡಿಗಲ್ಲಿನಂತೆ ವಿಕಾರಗಳನ್ನು ಹೊಂದದೆ ಇರುವ ನಿನಗೆ ನಮಸ್ಕಾರವು. ಪರಬ್ರಹ್ಮಸ್ವರೂಪಳಾದ ಶುದ್ಧಮನಸ್ಸಿನಿಂದ ತಿಳಿಯಲು ಯೋಗ್ಯಳಾದ, ಪ್ರತ್ಯಗಾತ್ಮರೂಪದಿಂದ ಪ್ರಕಾಶಮಾನವಾದ ಸ್ವರೂಪವುಳ್ಳ ನಿನಗೆ ನಮಸ್ಕಾರವು. ಓಂಕಾರವು ಒಳಗೊಂಡಿರುವ ಅಕಾರವು ಬ್ರಹ್ಮನನ್ನೂ, ಉಕಾರವು ವಿಷ್ಣುವನ್ನೂ, ಮಕಾರವು ರುದ್ರನನ್ನೂ ನಾಲ್ಕನೆಯದಾದ ಅರ್ಧಮಾತ್ರೆಯು ಸ್ಪಷ್ಟವಾಗಿ ಶುದ್ಧಪರಬ್ರಹ್ಮ ಚೈತನ್ಯವನ್ನೂ ಬೋಧಿಸುತ್ತದೆ ಎಂದು ಶೃತಿಯು ಹೇಳುತ್ತದೆ. ಶುದ್ಧ ಹೃದಯದಲ್ಲಿ ಗೆರೆಯಂತೆ ಸ್ಪಷ್ಟವಾಗಿ ಗೋಚರವಾಗುವ ಚೈತನ್ಯರೂಪಳಾದ ಬ್ರಹ್ಮರೂಪಿಯಾದ ದೇವಿಗೆ ನಮಸ್ಕಾರವು.

**ಜ್ಞಾತಂ ಮಯಾಽಖಿಲಮಿದಂ ತ್ವಯಿಸನ್ನಿವಿಷ್ಟಂ ತ್ವತ್ತೋಽಸ್ಯ ಸಂಭವಲಯಾತಿ ಮಾತರದ್ಯ।**
**ಶಕ್ತಿಶ್ಚತೇಽಸ್ಯ ಕರಣೇ ವಿತತ ಪ್ರಭಾವಾ ಜ್ಞಾತಾಧುನಾ ಸಕಲ ಲೋಕಮಯಾತಿ ನೂನಮ್॥**

ಪ್ರಪಂಚಕ್ಕೆ ಕಾರಣವಾದ ಮಾತೆಯೇ, ಈ ಪ್ರಪಂಚವೆಲ್ಲವೂ ನಿನ್ನಲ್ಲೇ ಇರುತ್ತದೆ. ನಿನ್ನಿಂದಲೇ ಈ ಪ್ರಪಂಚಕ್ಕೆ ಉತ್ಪತ್ತಿಯೂ ನಾಶವೂ ಆಗುತ್ತದೆ.

**ವಿಸ್ತಾರ್ಯ ಸರ್ವಮಖಿಲಂ ಸದಸದ್ವಿಕಾರಂ ಸಂದರ್ಶಯಸ್ಯ ವಿಕಲಂ ಪುರುಷಾಯಕಾಲೇ।**
**ತತ್ತ್ವೈಶ್ಚ ಷೋಡಶಭಿರೇವ ಚ ಸಪ್ತಭಿಶ್ಚ ಭಾಸೇಂದ್ರ ಜಾಲಮಿವ ನಃ ಕಿಲ ರಂಜನಾಯ॥**

ಆಕಾಶವಾಯುಗಳಿಂದಾಗುವ ಸತ್ಕಾರ್ಯರೂಪವಾದ ಮತ್ತು ತೇಜಸ್ಸು, ಜಲ,

ಪೃಥಿವಿಗಳಿಂದ ಆಗುವ ಅಸತ್ಕಾರ್ಯರೂಪವಾದ ಸಮಸ್ತ ಪ್ರಪಂಚವನ್ನೂ ಮತ್ತು ಮಹತ್ತತ್ತ್ವವೇ ಮೊದಲಾದ ಇಪ್ಪತ್ತೂರು ತತ್ತ್ವಗಳಿಂದಲೇ ನಮಗೆ ಇಂದ್ರಜಾಲ ವಿದ್ಯೆಯಂತೆ ತೋರುತ್ತಾ ಪ್ರಕಾಶಿಸುತ್ತೀಯೆ!

ನ ತ್ವಾಮೃತೇ ಕಿಮಪಿ ವಸ್ತುಗತಂ ವಿಭಾತಿ ವ್ಯಾಪ್ಯೈವ ಸರ್ವಮಖಿಲಂ ತ್ವಮವಸ್ಥಿತಾಽಸಿ।
ಶಕ್ತಿಂ ವಿನಾ ವ್ಯವಹೃತೇ ಪುರುಷೋಽಪ್ಯಶಕ್ತೋ ಬಂಭಣ್ಯತೇ ಜನನಿ ಬುದ್ಧಿಮತಾ ಜನೇನ॥

ನಿನ್ನನ್ನು ಬಿಟ್ಟುಯಾವ ವಸ್ತುವೂ ಸ್ವತಂತ್ರವಾಗಿಲ್ಲ. ನೀನು ಎಲ್ಲೆಡೆಗಳಲ್ಲಿರುವ ಎಲ್ಲ ವಸ್ತುಗಳನ್ನೂ ವ್ಯಾಪಿಸಿಕೊಂಡಿರುವೆ. ಓ ತಾಯಿಯೇ ನಿನ್ನನ್ನು ಬಿಟ್ಟು ಪುರುಷನು ಯಾವ ವ್ಯವಹಾರವನ್ನೂ ಮಾಡಲಾರನು.

ಪ್ರೀಣಾಸಿ ವಿಶ್ವಮಖಿಲಂ ಸತತಂ ಪ್ರಭಾವೈಃ ಸ್ವೈಸ್ತೇಜಸಾ ಚ ಸಕಲಂ ಪ್ರಕಟೀಕರೋಷಿ।
ಅತ್ಸ್ಯೇವ ದೇವಿ ತರಸಾ ಕಿಲಕಲ್ಪಕಾಲೇ ಕೋ ವೇದ ದೇವಿ ಚರಿತಂ ತವ ವೈಭವಸ್ಯ॥

ಓ ದೇವಿಯೇ, ನೀನು ಸಕಲ ಪ್ರಪಂಚವನ್ನೂ ನಿನ್ನ ಮಹಿಮೆಯಿಂದ ಅನುಗ್ರಹಿಸಿರುವ ಸ್ವಭಾವಗಳಿಂದ ಯಾವಾಗಲೂ ಸಂತೋಷಪಡಿಸುತ್ತೀಯೆ. ನಿನ್ನ ತೇಜಸ್ಸಿನಿಂದ ಎಲ್ಲರನ್ನೂ ಸೃಷ್ಟಿಮಾಡುತ್ತೀಯೆ. ಪ್ರಳಯಕಾಲದಲ್ಲಿ ವೇಗದಿಂದ ಆ ಪ್ರಪಂಚವನ್ನು ನಿನ್ನಲ್ಲಿ ಅಡಗಿಸಿಕೊಳ್ಳುತ್ತೀಯೆ. ನಿನ್ನ ಇಂತಹ ಸಾಮರ್ಥ್ಯದ ಐಶ್ವರ್ಯದ ನಡೆವಳಿಕೆಯನ್ನು ಯಾವನು ತಾನೇ ತಿಳಿದಾನು?

ಯಾಚೇಽಮ್ಬ ತೇಽಂಘ್ರಿಕಮಲಂ ಪ್ರಣಿಪತ್ಯಕಾಮಂ ಚಿತ್ತೇ ಸದಾವಸತು ರೂಪಮಿದಂ ತವೈತತ್।
ನಾಮಾಪಿವಕ್ತ್ರಕುಹರೇ ಸತತಂ ತವೈವ ಸಂದರ್ಶನಂ ತವ ಪದಾಂಬುಜಯೋಃ ಸದೈವ॥

ಓ ತಾಯಿಯೇ ಕಮಲದಂತಿರುವ ನಿನ್ನ ಪಾದಗಳನ್ನು ಚೆನ್ನಾಗಿ ನಮಸ್ಕರಿಸಿ ಹೀಗೆ ಹೇಳಿಕೊಳ್ಳುತ್ತೇನೆ: ನಿನ್ನ ರೂಪವು ಸದಾ ನನ್ನ ಮನಸ್ಸಿನಲ್ಲಿರಲಿ, ನಿನ್ನ ಹೆಸರು ನನ್ನ ಮುಖದಲ್ಲಿ ಯಾವಾಗಲೂ ಉಚ್ಚರಿಸಲ್ಪಡುತ್ತಿರಲಿ, ನಿನ್ನ ಪಾದ ಕಮಲಗಳ ದರ್ಶನವು ನನಗೆ ಯಾವಾಗಲೂ ಆಗುತ್ತಿರಲಿ.

ತ್ವಂ ವೇತ್ಸಿ ಸರ್ವಮಖಿಲಂ ಭುವನ ಪ್ರಪಂಚಂ ಸರ್ವಜ್ಞತಾ ಪರಿಸಮಾಪ್ತಿ ನಿತಾಂತ ಭೂಮಿಃ।
ಕಿಂ ಪಾಮರೇಣ ಜಗದಂಬ ನಿವೇದನೀಯಂ ಯದ್ಯುಕ್ತಮಾಚರ ಭವಾನಿ ತವೇಂಗಿತಂ ಸ್ಯಾತ್॥

ನೀನು ಎಲ್ಲ ಪ್ರಪಂಚಗಳ ವಿವರಗಳನ್ನೂ ತಿಳಿದಿರುವೆ, ಸರ್ವಜ್ಞತೆಗೆ ಕೊನೆಗೆ ಗಡಿಯಾಗಿರುವೆ. ನಿನಗಿಂತಲೂ ಹೆಚ್ಚಿನ ಸರ್ವಜ್ಞನಿಲ್ಲ. ಏನೂ ತಿಳಿವಳಿಕೆ ಇಲ್ಲದ ನಾನು ಏನನ್ನು ವಿಜ್ಞಾಪಿಸಲಿ? ಆದುದರಿಂದ ದೇವಿಯೇ, ಯಾವದು ಯುಕ್ತವೆಂದು ನಿನಗೆ ತೋರುವದೋ, ನಿನ್ನ ಇಷ್ಟವಾದುದೋ ಅದನ್ನು ಮಾಡು.

ತ್ವಂ ಚೇದ್ಭವಾನಿ ದಯಸೇ ಪುರುಷಂ ಪುರಾಣಂ ಜಾನೇಽಹಮದ್ಯ ತವಸಂನಿಧಿ ನಃ ನ ದೈವ।
ನೋ ಚೇದಹಂ ವಿಭುರನಾದಿರನೀಹ ಈಶೋ ವಿಶ್ವಾತ್ಮ ಧೀರಿತಿ ತಮಃ ಪ್ರಕೃತಿಃ ಸದೈವ॥

ಓ ಭವಾನಿಯೇ ನೀನು ಅನುಗ್ರಹಮಾಡಿ ಬ್ರಹ್ಮವಿದ್ಯೆಯನ್ನು ನನ್ನಲ್ಲಿ ಕರುಣಿಸಿದರೆ ಅನಾದಿಯಾದ ಪರಮಾತ್ಮನ ಸ್ವರೂಪವನ್ನು ನಾನೂ ತಿಳಿದುಕೊಂಡೇನು, ಎಂದು ನಿನ್ನ ಸನ್ನಿಧಿಯಲ್ಲಿ ಈಗ ನಿಶ್ಚಯಿಸಿರುತ್ತೇನೆ. ಇಲ್ಲದಿದ್ದರೆ, ಆ ಪುರುಷನು

ಪರಮಾತ್ಮರೂಪನಾದರೂ ತಾನು ವಿಭುವು—ಆದಿ ಇಲ್ಲದವನು, ಈಶ್ವರನು, ವಿಶ್ವ ವ್ಯಾಪಕನು, ಸರ್ವಜ್ಞನು—ಎಂಬ ತಿಳಿವಳಿಕೆಯನ್ನು ಪಡೆಯದೆ ಅಹಂಕಾರದಿಂದ ಕೂಡಿ ಅಜ್ಞಾನ ಸ್ವಭಾವವುಳ್ಳವನಾಗುತ್ತೇನೆ.

ವಿದ್ಯಾತ್ವಮೇವ ನನು ಬುದ್ಧಿಮತಾಂ ನರಾಣಾಂ ಶಕ್ತಿಸ್ತ್ವಮೇವ ಕಿಲಶಕ್ತಿಮತಾಂ ಸದೈವ।
ತ್ವಂ ಕೀರ್ತಿಕಾಂತಿ ಕಮಲಾಮಲ ತುಷ್ಟಿರೂಪಾ ಮುಕ್ತಿಪ್ರದಾ ವಿರತಿರೇವ ಮನುಷ್ಯಲೋಕೇ॥

ನೀನು ಬುದ್ಧಿವಂತರ ವಿದ್ಯೆಯಸ್ವರೂಪಳು, ಶಕ್ತಿವಂತರ ಶಕ್ತಿಸ್ವರೂಪಳು, ಕೀರ್ತಿರೂಪಳು, ಕಾಂತಿರೂಪಳು, ಲಕ್ಷ್ಮೀಸ್ವರೂಪಳು ಶುದ್ಧವಾದ ಸಂತೋಷ ಸ್ವರೂಪಳು. ಭೂಲೋಕದಲ್ಲಿ ಜ್ಞಾನಿಗಳಿಗೆ ಮುಕ್ತಿಸಾಧನವಾದ ವೈರಾಗ್ಯಸ್ವರೂಪಳು.

ಗಾಯತ್ರ್ಯಪಿ ಪ್ರಥಮ ವೇದಕಲಾ ತ್ವಮೇವ
ಸ್ವಾಹಾ ಸ್ವಧಾ ಭಗವತೇ ಸುಗುಣಾರ್ಥಮಾತ್ರಾ
ಆಮ್ನಾಯ ಏವ ವಿಹಿತೋ ನಿಗಮೋ ಭವತ್ಯಾ
ಸಂಜೀವನಾಯ ಸತತಂ ಸುರಪೂರ್ವ ಜಾನಾಮ್॥

ನೀನು ಗಾಯತ್ರಿ ಸ್ವರೂಪಳು, ವೇದವಿದ್ಯೆಯು, ದೇವ ಯಜ್ಞದಲ್ಲಿ ಸ್ವಾಹಾ ರೂಪಳು. ಪಿತೃಯಜ್ಞದಲ್ಲಿ ಸ್ವಧಾರೂಪಳು. ಪೂಜ್ಯಳಾದ ನೀನು ಪ್ರಪಂಚದ ಸೃಷ್ಟಿಯೇ ಮೊದಲಾದ ವ್ಯವಹಾರದಲ್ಲಿರುವಾಗ ಗುಣಗಳ ಸಂಬಂಧವಿರುವ ತ್ರಿಮೂರ್ತಿ ಸ್ವರೂಪಳು, ಓಂಕಾರದ ಅರ್ಧಮಾತ್ರೆಯು ಸೂಚಿಸುವ ಬ್ರಹ್ಮ ಸ್ವರೂಪಳು. ದೇವತೆಗಳೇ ಮೊದಲಾದವರನ್ನು ಉದ್ಧರಿಸಲು ಜ್ಞಾನವನ್ನು ನೀಡುವ ಶಾಸ್ತ್ರವನ್ನೂ ವೇದಗಳನ್ನೂ ಕೊಟ್ಟಿರುತ್ತೀಯೆ.

ತ್ರಾತಾ ತ್ವಮೇವ ಮಮಮೋಹ ಮಯಾದ್ಧವಾಬ್ಧೇ
ಸ್ತ್ವಾಮಂಬಿಕೇ ಸತತಮೇಮಿ ಮಹಾರ್ತಿದೇ ಚ।
ರಾಗಾದಿಭಿರ್ವಿರಚಿತೇ ವಿತಥೇ ಕಿಲಾಂತೇ
ಮಾಮೇವ ಪಾಹಿ ಬಹುದುಃಖಕರೇ ಚ ಕಾಲೇ॥

ಓ ಮಾತೆಯೇ, ಈ ಮೋಹರೂಪವಾದ ಸಂಸಾರವೆಂಬ ಸಮುದ್ರದಿಂದ ನನ್ನನ್ನು ದಾಟಿಸಿ ಕಾಪಾಡತಕ್ಕವಳು ನೀನೇ. ಆದರಿಂದ ನಿನಗೆ ಶರಣಾಗಿದ್ದೇನೆ. ರಾಗಾದಿಗಳಿಂದ, ಮಿಥ್ಯಾರೂಪವಾದ ತುಂಬ ದುಃಖವನ್ನು ಕೊಡುವ ಈ ಸಂಸಾರ ದಲ್ಲಿರುವ ನನ್ನನ್ನು ಪ್ರಳಯ ಕಾಲದಲ್ಲಿ ತಕ್ಕ ಸಮಯದಲ್ಲಿ ಕಾಪಾಡು.

ನಮೋ ದೇವಿ ಮಹಾವಿದ್ಯೇ ನಮಾಮನಿ ಚರಣೌ ತವ।
ಸದಾಜ್ಞಾನಪ್ರಕಾಶಂ ಮೇ ದೇಹಿ ಸರ್ವಾರ್ಥದೇ ಶಿವೇ॥

ಬ್ರಹ್ಮವಿದ್ಯಾಸ್ವರೂಪಳಾದ ಓ ದೇವಿಯೇ ನಿನಗೆ ನಮಸ್ಕಾರವು. ನಿನ್ನ ಪಾದ ಗಳಿಗೆ ನಮಸ್ಕರಿಸುತ್ತೇನೆ. ಎಲ್ಲ ಇಷ್ಟಾರ್ಥವನ್ನೂ ಕೊಡುವ ಮಂಗಳ ರೂಪಳಾದ ಓ ದೇವಿಯೇ, ನನಗೆ ಯಾವಾಗಲೂ ಜ್ಞಾನವೆಂಬ ದೀಪದ ಪ್ರಕಾಶವನ್ನು ಅನುಗ್ರಹಿಸು.

# ಉಪಾಸನೆ - ೧೦ ದುರ್ಗವನ್ನು ದಾಟುವ ಉಪಾಯ

## ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀ ಸ್ವಾಮಿಗಳು

ಉಪಾಸನೆಗೆ ಹತ್ತಿರ ಕೂತುಕೊಂಡಿರುವುದು ಎಂದು ಅಕ್ಷರಾರ್ಥ. ಭಗವಂತನು ಎಲ್ಲೆಲ್ಲಿಯೂ ಇರುವನು, ಇಲ್ಲಿಯೇ ನಮ್ಮ ಆತ್ಮನೇ ಆಗಿರುತ್ತಾನೆ. ಆದರೆ ಇದನ್ನು ಭಾವನೆಯಲ್ಲಿಟ್ಟುಕೊಂಡಿರುವದಿಲ್ಲವಾಗಿ ನಾವು ಭಗವಂತನಿಗೆ ದೂರವಾಗಿರುತ್ತೇವೆ. ಆತನು ನಮ್ಮ ಬಳಿಯಲ್ಲಿಯೇ ಇರುತ್ತಾನೆಂಬುದನ್ನು ನಮ್ಮ ಮನಸ್ಸು ಕಂಡುಕೊಳ್ಳುವದಕ್ಕೆ ಮಾಡುವ ಪ್ರಯತ್ನವೇ ಉಪಾಸನೆ. ಉಪಾಸನೆಗೆ ಅಥವಾ ಧ್ಯಾನಕ್ಕೆ ಧ್ಯಾನ ಮಾಡುವವನ ಮನಸ್ಸು, ಧ್ಯಾನಕ್ಕೆ ವಿಷಯವಾದ ವಸ್ತು— ಎರಡೂ ಉತ್ತಮವಾಗಿರಬೇಕು. ಹಾಗಿದ್ದರೆ ಮಾತ್ರ ಉತ್ತಮ ಫಲವುಂಟು. ನಮ್ಮ ಮನಸ್ಸು ಪ್ರೇಮದಿಂದ ಕೂಡಿದ್ದರೆ ವಸ್ತುವಿನ ಬಳಿಯೇ ಸುಳಿದಾಡುತ್ತಿರುತ್ತದೆ. ವಸ್ತು ದೂರದಲ್ಲಿದ್ದರೂ ಪ್ರೇಮದಿಂದ ಹತ್ತಿರವಾಗಿರುತ್ತದೆ, ಹತ್ತಿರವಿದ್ದರೂ ಔದಾಸೀನ್ಯ ದಿಂದ ದೂರವಾಗುತ್ತದೆ, 'ಈಕೆಗೆ ಕಾಶಿಯಲ್ಲಿರುವ ಮಗಳೂ ಹತ್ತಿರ, ಮನೆಯ ಲ್ಲಿರುವ ಸೊಸೆಯೂ ದೂರ' ಎನ್ನುವಂತೆ. ಇದರಂತೆ ವಸ್ತುವು ಬದಲಾಯಿಸಿದರೂ ಅದರಲ್ಲಿ ಪ್ರೇಮವು ಕಡಿಮೆಯಾಗಿ ಅದು ದೂರವಾಗುತ್ತದೆ. ಆಕಳು ಹಾಲು ಕರೆಯುವದು ನಿಲ್ಲುತ್ತಲೂ, ಮನೆಯಲ್ಲಿದ್ದರೂ ಅದರ ವಿಚಾರವನ್ನು ಕೆಲವರು ಅವಿವೇಕಿಗಳು ಕೈಬಿಡುವರು, ಹಾಲು ಕರೆಯುವಾಗ ಮಾತ್ರವೇ ಅದಕ್ಕೆ ಉಪಚಾರ!

ಸ್ವಲ್ಪವೂ ಮಾರ್ಪಡದೆ, ದೇಶಕಾಲದಿಂದ ಹೆಚ್ಚು ಕಡಿಮೆಯಾಗದ ತತ್ತ್ವವೇ ಭಗವಂತ. ಅದರಲ್ಲಿ ಮನಸ್ಸನ್ನು ನಿಲ್ಲಿಸಿಕೊಳ್ಳುವದೇ ಭಗವಂತನ ಉಪಾಸನೆ.

'ಮಚ್ಚಿತ್ತಃ ಸರ್ವ ದುರ್ಗಾಣಿ ಮತ್ಪ್ರಸಾದಾತ್ ತರಿಷ್ಯಸಿ'—ನನ್ನಲ್ಲಿಯೇ ಚಿತ್ತವನ್ನಿಟ್ಟುಕೊಂಡಿದ್ದರೆ ಸರ್ವದುರ್ಗಗಳನ್ನೂ ನನ್ನ ಪ್ರಸಾದದಿಂದ ದಾಟುವೆ.

'ಮನ್ಮನಾಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು। ಮಾಮೇ ವೈಷ್ಯಸಿ ಸತ್ಯಂತೇ ಪ್ರತಿಜಾನೇ ಪ್ರಿಯೋಽಸಿ ಮೇ॥'—ನನ್ನಲ್ಲಿಯೇ ಮನಸ್ಸಿಡು, ನನ್ನ ಭಕ್ತನಾಗಿರು, ನನಗಾಗಿ ಯಾಗಮಾಡು, ನನ್ನನ್ನೇ ನಮಸ್ಕರಿಸು. ನೀನು ನನಗೆ ಪ್ರಿಯನಾದ್ದರಿಂದ ಪ್ರತಿಜ್ಞೆಮಾಡಿ ಹೇಳುತ್ತೇನೆ, ಹೀಗೆ ಮಾಡುತ್ತಿದ್ದರೆ ಸತ್ಯವಾಗಿಯೂ ನನ್ನನ್ನೇ ಸೇರುವೆ. "ಮಯ್ಯೋ ವ ಮನ ಅಧತ್ಸ್ವಮಯಿ ಬುದ್ಧಿಂ ನಿವೇಶಯ। ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ॥" ನನ್ನಲ್ಲಿಯೇ ಮನಸ್ಸಿಡು. ನನ್ನಲ್ಲಿಯೇ ಬುದ್ಧಿಯನ್ನಿಡು, ಇನ್ನು ಮೇಲೆ ನನ್ನಲ್ಲಿಯೇ ನಿವಾಸ ಮಾಡಿಕೊಂಡಿರುವೆ. ಇದಕ್ಕೆ ಸಂಶಯವಿಲ್ಲ.

ಇಂಥಾ ಗೀತಾವಚನಗಳನ್ನು ಭಗವಂತನು ನಮಗೇ ಬೇರೆಯಾಗಿ ಮಾಡಿರುವ ವಾಗ್ದಾನಗಳೆಂದು ಭಾವಿಸಬೇಕು. ಭಗವಂತನನ್ನು ಉಪಾಸನೆ ಮಾಡಿದ ಎಷ್ಟೋ ಜನರು ಈ ವಾಗ್ದಾನಗಳು ತಮ್ಮ ಪಾಲಿಗೆ ಅಕ್ಷರಶಃ ನಿಜವಾದದ್ದನ್ನು ಮನಗಂಡಿರುತ್ತಾರೆ.

ಗೀತೆಯನ್ನು ಪಾರಾಯಣ ಮಾಡುತ್ತೇನೆ ಎಂದು ಕುತೂಹಲಕ್ಕಾಗಿ, ತೋರುಗಾಣಿಕೆಗಾಗಿ ಓದಿದರೆ ಸಾಲದು. ಅದರಲ್ಲಿರುವ ಯಾವದಾದರೊಂದು ವಾಗ್ದಾನವನ್ನು ಪರೀಕ್ಷಿಸಿ ನೋಡಲು ಸೊಂಟಕಟ್ಟಿ ನಿಂತರೆ, ಉಪಾಸನೆಯ ಫಲವು ಅನುಭವಕ್ಕೆ ಬರುವದು.

ದುರ್ಗಗಳೆಂದರೆ ದಾಟುವದಕ್ಕಾಗದಂತೆ ಕಾಣುವ ಕಷ್ಟಗಳು. ಕಷ್ಟಗಳು ಬಾರದೆ ಇರುವ ಜೀವನವು ಯಾರದ್ದು ತಾನೆ ಇದೆ? ಕಷ್ಟಗಳೇ ಬಾರದಂತೆ ಇರುವ ಬಯಕೆಯ ಇಷ್ಟವೂ ಅಲ್ಲ, ನೆರವೇರತಕ್ಕದ್ದಲ್ಲ. 'ಕಷ್ಟ ಬೇಕಾದಷ್ಟು ಬರಲಿ. ನಿನ್ನ ದಯೆ ಮಾತ್ರ ಇರಲಿ' ಎಂದು ಒಬ್ಬ ಭಾಗವತೋತ್ತಮರು ತನ್ನ ಗುರುವನ್ನು ಬೇಡಿಕೊಂಡಿರುತ್ತಾರೆ. ಅದೇ ಸರಿಯಾದ ಮಾರ್ಗ. ಭಗವಂತನೂ 'ನನ್ನ ಪ್ರಸಾದದಿಂದ ಸರ್ವ ದುರ್ಗಗಳನ್ನೂ ದಾಟುವೆ' ಎಂದಿತ್ತಿರುವ ವಾಗ್ದಾನವನ್ನು ನಾವು ಉಪಯೋಗಿಸಿಕೊಳ್ಳಬೇಕು.

ಬರೀ ಮನಶ್ಶಕ್ತಿಯಿಂದ ಯಾವ ಕಷ್ಟವನ್ನಾದರೂ ದಾಟಬಲ್ಲೆನೆನ್ನುವುದು ಬಡಾಯಿಮಾತ್ರವೇ! ಇಂತಹ ಮನಶ್ಶಕ್ತಿ ಭಗವಚ್ಚಿತ್ತತೆಯಿಂದ ಬರುತ್ತದೆ. ಚಿತ್ತವನ್ನು ಎಡೆಬಿಡದೆ ಭಗವಂತನಲ್ಲಿಯೇ ನಿಲ್ಲಿಸಿಕೊಳ್ಳುವ ಮಹನೀಯರಿಗೆ ಎಷ್ಟೇ ಎತ್ತರದ ಕಷ್ಟಗಳೆಂಬ ದುರ್ಗಗಳನ್ನೂ ಸಣ್ಣ ಸಣ್ಣ ಮಣ್ಣು ಗುಪ್ಪೆಗಳಂತೆ ದಾಟುವ ಶಕ್ತಿ ಬರುತ್ತದೆ. ಇದಕ್ಕೆ ಒಂದೇ ಸಾಧನ—ಭಗವಂತನ ಪ್ರಸಾದ. ಈ ಪ್ರಸಾದ ಪ್ರಾಪ್ತಿಗೆ ಭಗವಚ್ಚಿತ್ತತೆಯೇ, ಭಗವಂತನ ಉಪಾಸನೆಯೇ ಉಪಾಯವು. ನಮ್ಮ ಪ್ರಯತ್ನಗಳಿಗೆ ಅಡ್ಡಿ ಆತಂಕಗಳು ಎದ್ದೆದ್ದು ಕಾಣಿಸಿಕೊಳ್ಳುವಾಗ ಆ ಕಷ್ಟ-ವಿಘ್ನ ಪರಂಪರೆಗಳನ್ನೂ ಕೇವಲ ನಮ್ಮ ಬಲದಿಂದ ಎದುರಿಸುವ ಸಂಕಲ್ಪ ಮೂರ್ಖತನದ್ದು. ಬದಲಿಗೆ, ಕೂಡಲೆ ನಮ್ಮ ಹೃದಯದಲ್ಲಿ ನಮ್ಮ ಬಳಿಯಲ್ಲಿಯೇ ಇರುವ ಭಗವಂತನನ್ನು ನೆನಪಿಸಿಕೊಂಡು, ಅವನಲ್ಲಿ ಚಿತ್ತವನ್ನಿಡಬೇಕು. ಆಗ ಭಗವಂತನ ಪ್ರಸಾದ ರೂಪವಾಗಿ ನಮ್ಮೊಳಗಿನಿಂದ ಬಲವು ಎದ್ದು ಕಾಣಿಸಿಕೊಳ್ಳುವದು; ಸೂರ್ಯಕಿರಣಕ್ಕೆ ಕರಗುವ ಮಂಜಿನಂತೆ ಕಷ್ಟಗಳು ಮಾಯವಾಗವವು.

ಅವನಲ್ಲಿ ಹೇಗೆ ಚಿತ್ತವನ್ನಿಟ್ಟುಕೊಳ್ಳಬೇಕು? ಭಗವಂತನು ಗೀತೆಯಲ್ಲಿ ಅಪ್ಪಣೆ ಕೊಡಿಸಿರುವಂತೆ ಸದ್ಗುರು ಉಪದೇಶದಂತೆ, ನಿಮ್ಮ ಮನಸ್ಸಿನಲ್ಲಾಗುವ ಭಗವಂತನ ಉತ್ತಮ ಕಲ್ಪನೆಯನ್ನು ಮಾಡಿಕೊಳ್ಳಿರಿ; ಅದನ್ನು ಬಿಡದೆ ಚಿಂತಿಸುತ್ತಿರಿ. ಕ್ರಮೇಣ ನಿಮಗೆ ಭಗವಂತನ ಪರಮಾರ್ಥ ತತ್ತ್ವದಲ್ಲಿ ವಿಶ್ರಾಂತಿಯು ದೊರಕುವದು; ಉಪಾಸನೆಯು ಗಟ್ಟಿಯಾಗುವದು. ಭಗವಂತನು "ಮನ್ಮನಾಮವ ಮದ್ಭಕ್ತೋ...." ಎಂದು ಹೇಳಿರುವದೇ ಉಪಾಸನೆ. ಒಂದು ಸಲ ಭಗವಂತನ ಕಡೆ, ಒಂದು ಸಲ ವಿಷಯಗಳ ಕಡೆ ತಿರುಗುವ ಚಿತ್ತವು ಒಳಗಿನ ಬಲವನ್ನು ಎಬ್ಬಿಸಲಾರದು. ಭಗವಂತನ ಹೊರತು ಮತ್ತೇನೂ ನಿಮ್ಮ ಮನಸ್ಸನ್ನಾಗಲೀ ಬುದ್ಧಿಯನ್ನಾಗಲೀ ಸೆಳೆಯ ಕೂಡದು. ಆಗ ಭಗವಂತನಲ್ಲಿಯೇ ನಿವಾಸ, ನೆಲೆ, ಆಗಲೇ ನಿಮ್ಮೊಳಗೆ ಅವಿತುಕೊಂಡಿದ್ದ ಬಲವು ನಿಮ್ಮದಾಗುವದು. ನಾವು ತಿಳಿದಿರಲಿ ತಿಳಿಯದಿರಲಿ

ಭಗವಂತನಲ್ಲಿಯೇ ಇರುತ್ತಿರುವೆವು. ಹುಟ್ಟಿದ ಎಲ್ಲ ಪ್ರಾಣಿಗಳಿಗೂ ಭಗವಂತನೇ ಆಸರೆ. ಆದರೆ ಯಾರು 'ನಾನು ಭಗವಂತನಲ್ಲಿ ವಾಸವಾಗಿರುತ್ತೇನೆ' ಎಂಬ ಭಾವನೆಯಲ್ಲಿರುವರೋ ಅವರಿಗೆ ಮಾತ್ರ ಆತನ ಅಭಯ ಹಸ್ತದ ಪ್ರಸಾದವು ದೊರೆಯುವದು, ಅವರು ಎಂಥ ದುರ್ಗಗಳನ್ನಾದರೂ ದಾಟುವರು. ಭಗವಂತನು ಹೇಳಿದಂತೆ ಅವನಲ್ಲೇ ಮನಸ್ಸಿಟ್ಟು, ಯಾಗ-ನಮಸ್ಕಾರ—ಮಾಡುವದೇ ಉಪಾಸನೆಯ ಪ್ರಯತ್ನ. ಸ್ತೋತ್ರ, ನಮಸ್ಕಾರ, ಜಪದಿಂದ ಅವನ ಪ್ರೇಮಸಂಪಾದನೆಗೆ ಪ್ರಯತ್ನ ಮಾಡಬೇಕು—ಭಗವಂತನು ಇಲ್ಲಿ, ಈಗ ನಮ್ಮೆದುರಿಗೇ ಇರುವನೆಂದು ಯಾವಾಗಲೂ ಭಾವಿಸುತ್ತಿದ್ದರೆ, ಅವನ ಆಶ್ವಾಸನೆಯಂತೆ ಅವನನ್ನೇ ಸೇರುವೆವು.

ಈಗಾಗಲೇ ಕಷ್ಟಗಳ ನಡುವೆ ಸಿಕ್ಕಿಕೊಂಡಿರುವಾಗ "ಭಗವಂತ, ಈ ಕಷ್ಟಗಳನ್ನು ದಾಟುವ ಶಕ್ತಿಯನ್ನು ಕೊಡುವ ಭಾರ ನಿನ್ನದು. ನಾನು ಕಷ್ಟಗಳನ್ನು ಸಹಿಸಲೇಬೇಕೆಂದು ನಿನ್ನ ಸಂಕಲ್ಪವಾಗಿದ್ದರೆ ಅದನ್ನು ಎದೆಗೆಡದೆ ಸಹಿಸುವ ಶಕ್ತಿಯನ್ನಾದರೂ ಕೊಡು" ಎಂದು ಪ್ರಾರ್ಥಿಸಿರಿ. ಅದರಿಂದ ಫಲವಾಗಲಿಲ್ಲವೆಂದರೂ ಪ್ರಯತ್ನವನ್ನು ಬಿಡಬಾರದು. ಪ್ರಾರ್ಥನೆಯು ಮುಂದುವರೆದಂತೆ ಮನಸ್ಸು ಶಾಂತವಾಗುತ್ತದೆ. ಇದು ಭಗವಂತನ ಮೊದಲ ಅನುಗ್ರಹವು. ಅನಂತರ ಮನಸ್ಸೂ ಬುದ್ಧಿಯೂ ಅವನಲ್ಲಿ ನಿಲ್ಲಲು ಸಿದ್ಧವಾಗುವದು ಎರಡನೆಯದು. ಕಟ್ಟಕಡೆಯಲ್ಲಿ ಅನಿರೀಕ್ಷಿತವಾಗಿ ನಮ್ಮ ಕಷ್ಟವು ಪಾರಾಗುವದು ಮೂರನೆಯ ಅನುಗ್ರಹವು.

ಕೆಲವು ವೇಳೆ ಪ್ರಾರ್ಥಿಸಿ ಪ್ರಾರ್ಥಿಸಿ ಸಾಕಾಗಿ 'ಭಗವಂತ ನಿನ್ನ ಇಷ್ಟವಿದ್ದದ್ದು ಆಗಲಿ' ಎಂದು ಕೈ ಬಿಡುವ ಹೊತ್ತಿಗೆ ಸರಿಯಾಗಿ ಕಷ್ಟಗಳು ಪಾರಾಗುವದು ಉಂಟು. ಅಂದರೆ, ಪ್ರಾರ್ಥನೆಯಲ್ಲಿ ನಮ್ಮ ಆತ್ಮ ನಿವೇದನೆಯು ಪೂರ್ಣವಾಗಿರದುದೇ ಅಡ್ಡಿಯಾಗಿತ್ತೆಂದು ತಿಳಿಯಬೇಕು. ಭಗವಂತನ ಪ್ರಸಾದವು ಆಗುತ್ತಿದ್ದರೂ ನಮ್ಮ ಸ್ವಾರ್ಥ ಬುದ್ಧಿಯು ಅದಕ್ಕೆ ಅಡ್ಡಿಯಾಗಿರುತ್ತದೆ. ಆದ್ದರಿಂದ ಮನಃಪೂರ್ವಕವಾಗಿ ಎಲ್ಲ ಭಾರವನ್ನೂ ಆತನ ಮೇಲೆಯೇ ಹಾಕಬೇಕು. ಆದರೆ ಯಾವ ಪ್ರಯತ್ನವಿಲ್ಲದೆ ಭಗವಂತನು ಕಾಪಾಡಿಯೇ ತೀರುವನೆಂದು ಕೈಕಟ್ಟಿ ಕುಳಿತ ಸೋಮಾರಿಗಳಿಗೆ ಈ ಅನುಗ್ರಹವು ದೊರಕುವದಿಲ್ಲ. ಎಡೆಬಿಡದೆ ಭಗವಂತನನ್ನೇ ನಂಬಿರುವ ಶ್ರದ್ಧಾಳುಗಳಿಗೆ, ಭಗವಂತನನ್ನೇ ಚಿಂತಿಸುವ ಸಾಧಕರಿಗೆ, ಇಂದೋ ನಾಳೆಯೋ ಎಂದೋ ಕಷ್ಟಗಳ ಪರಾಭವವಾಗುವುದು. ಆದ್ದರಿಂದಲೇ ಭಗವಂತನು "ಬುದ್ಧಿಯೋಗವನ್ನು ಆಶ್ರಯಿಸಿ ಸತತವಾಗಿ ನನ್ನಲ್ಲಿಯೇ ಚಿತ್ತವಿಟ್ಟಿರು" ಎಂದು ಹೇಳಿರುತ್ತಾನೆ.

ಕೊನೆಗೂ ಯಾವ ಸಹಾಯವೂ ದೊರಕಿಲ್ಲದಾಗಲೂ 'ಆಗಲಿ, ಭಗವಂತ ನಿದ್ದಾನೆ, ಆತನ ಬೆಂಬಲವಿರುವಾಗ ಈ ಕಷ್ಟವು ಏನು ಮಾಡೀತು' ಎಂದು ಧೈರ್ಯ-ತಾಳ್ಮೆ-ಸುಮ್ಮಾನವನ್ನು ಬಿಡದೆ ಕಷ್ಟವನ್ನು ಅನುಭವಿಸುವಂತೆ ಅನುಗ್ರಹಿಸೆಂದು ಮೊರೆಯಿಡಬೇಕು. ಆಗ ಬಂದಿದ್ದ ಕಷ್ಟವು ಹಲ್ಲು ತೆಗೆದ ವಿಷದ ಹಾವಿನಂತೆ ನಮ್ಮನ್ನು ಯಾವ ಬಗೆಯಿಂದಲೂ ಅಲುಗಾಡಿಸಲಾರದೆ, ಕೆಲವು ದಿನಗಳು ತೋರಿಕೊಂಡು ತಾನೇ ಹಿಂಜರಿಯುವದು.

# ಭಗವದ್ಗೀತೆ ಮತ್ತು ಉಪನಿಷತ್ತು

ವಿದ್ಯಾಲಂಕಾರ, ಶಾಸ್ತ್ರಚೂಡಾಮಣಿ, ಗಾನಕಲಾರತ್ನ, ವೇದಾಂತನಿಧಿ
ಪ್ರೊ|| ಸಾ. ಕೃ. ರಾಮಚಂದ್ರರಾವ್
೩೦೫, ೬ನೇ ಕ್ರಾಸ್, ೧ನೇ ಬ್ಲಾಕ್, ಜಯನಗರ, ಬೆಂಗಳೂರು-೧೧ ✆ ೨೬೬೩೧೯೫೭

ಸಂಪ್ರದಾಯದಂತೆ ವೇದಾಂತಪ್ರಸ್ಥಾನಗಳು ಮೂರು—ಉಪನಿಷತ್ತುಗಳು, ಅವುಗಳ ಸಾರಸ್ವರೂಪವಾದ ಭಗವದ್ಗೀತೆ ಮತ್ತು ಉಪನಿಷತ್ತುಗಳ ವಿಚಾರವನ್ನೊಳಗೊಂಡ ವೇದಾಂತಸೂತ್ರಗಳು—(ಬ್ರಹ್ಮಸೂತ್ರ, ಶಾರೀರಕಸೂತ್ರ, ವೇದಾಂತ ಮೀಮಾಂಸಾಸೂತ್ರಗಳು). ಮೂರಕ್ಕೂ ಉಪನಿಷತ್ತುಗಳೇ ಪ್ರಧಾನ ಸಾಮಗ್ರಿ. ಸ್ಮೃತಿಪ್ರಸ್ಥಾನವೆನಿಸಿದ ಭಗವದ್ಗೀತೆಯೂ, ನ್ಯಾಯಪ್ರಸ್ಥಾನವೆನಿಸುವ ಸೂತ್ರಗಳೂ ಶ್ರುತಿಪ್ರಸ್ಥಾನವೆನಿಸಿದ ಉಪನಿಷತ್ತುಗಳನ್ನೇ ಅವಲಂಬಿಸಿದೆ. ಗೀತೆಯು ಉಪನಿಷತ್ತುಗಳ ಜನಪ್ರಿಯ ಆವೃತ್ತಿ; ಗೀತೆಯ ಪ್ರತಿ ಅಧ್ಯಾಯದ ಪುಷ್ಪಿಕೆಯಲ್ಲೂ **ಶ್ರೀಮದ್ ಭಗವದ್ಗೀತಾಸು ಉಪನಿಷತ್ಸು** ಎಂಬಲ್ಲಿಯ ಬಹುವಚನಪ್ರಯೋಗವೂ ಗಮನಿಸಬೇಕಾದುದೇ. ಉಪನಿಷತ್ತುಗಳು ಅನೇಕವಾಗಿರುವಂತೆ ಗೀತೆಗಳೂ ಅನೇಕ ಎಂದರೆ ಗೀತೆಯಲ್ಲಿ ಅಡಗಿರುವ ರಹಸ್ಯಗಳು ಹಲವು. ಉಪನಿಷತ್ತು ಎನ್ನುವ ಮಾತಿಗೆ ರಹಸ್ಯವಿದ್ಯೆಯೆಂದೇ ಅರ್ಥವಲ್ಲವೆ? ವೇದಾಂತದೇಶಿಕರು ಉಪನಿಷತ್ತಿನಂತೆ ಗೀತೆಯೂ ಸ್ತ್ರೀಲಿಂಗವಾಚಿಯೇ ಎಂದು ಸೂಚಿಸಿದ್ದಾರೆ. ಎಂದರೆ ಎರಡೂ ಸಮಾನಾರ್ಥಕವಾದ ಪದಗಳೇ.

ಪ್ರಸ್ಥಾನತ್ರಯದಲ್ಲಿ ಗೀತೆಯು ಅಧ್ಯಾತ್ಮಶಾಸ್ತ್ರ. **ವೇದಾಂತೋ ನಾಮ ಉಪನಿಷತ್‌ಪ್ರಮಾಣಂ; ತದುಪಕಾರೀಣಿ ಶಾರೀರಕಸೂತ್ರಾದೀನಿ ಚ; ಆದಿ ಶಬ್ದೇನ ಭಗವದ್ಗೀತಾದ್ಯಧ್ಯಾತ್ಮಶಾಸ್ತ್ರಾಣಿ ಗೃಹ್ಯಂತೇ** ಎಂದು ಸದಾನಂದರ ಒಕ್ಕಣೆ. ಅಧ್ಯಾತ್ಮವೆಂದರೆ ಆತ್ಮನನ್ನು ಕುರಿತದ್ದು, ಆತ್ಮಾನಾತ್ಮವಿವೇಕ. ಇಲ್ಲಿ ಸಾಧನವೇ ಪ್ರಧಾನ. ಈ ಸಾಧನವಾದರೋ ಉಪನಿಷತ್ತುಗಳನ್ನೇ ಅವಲಂಬಿಸಿದ್ದು. ಹಾಗೆಂದೇ ಶ್ರೀಶಂಕರರು ಗೀತೆಯನ್ನು **ಸಮಸ್ತವೇದಾರ್ಥಸಾರಸಂಗ್ರಹಭೂತಂ** ಎಂದು ಬಣ್ಣಿಸಿದರು. ವೇದದ ತಾತ್ಪರ್ಯ ಉಪನಿಷತ್ತುಗಳಲ್ಲಿಯೇ ಕಂಡುಬರುವುದರಿಂದ ಉಪನಿಷತ್ತೇ ವೇದಾರ್ಥ. ಇದರ ಸಾರವೆಂದರೆ ಸಾಧನಭಾಗವೇ. ಎಲ್ಲ ಉಪನಿಷತ್ತುಗಳಲ್ಲಿ ಹೇಳಲ್ಪಡುವ ಆತ್ಮವಿಚಾರವಾದ ಸಾಧನಗಳನ್ನು ಸಂಗ್ರಹವಾಗಿ ಹೇಳಿರುವುದು ಗೀತೆಯಲ್ಲಿ. ಇದು ಶಂಕರರ ಮಾತಿನ ಸ್ವಾರಸ್ಯ.

ರಾಮಾನುಜರೂ ಗೀತೆಯನ್ನು **ವೇದಾಂತೋದಿತಂ** ಎಂದು ನಿರ್ದೇಶಿಸಿದರು. ವೇದಾಂತವೆಂದರೆ ಉಪನಿಷತ್ತುಗಳೇ; ಉಪನಿಷತ್ತುಗಳಲ್ಲಿ ಹೇಳಲ್ಪಟ್ಟಿರುವ ಸಾಧನವನ್ನೂ ಸಿದ್ಧಾಂತವನ್ನೂ ಗೀತೆ ಒಳಗೊಂಡಿದೆಯೆಂದರ್ಥ. ರಾಮಾನುಜರ ಮಾತನ್ನು ವಿವರಿಸುತ್ತ ವೇದಾಂತದೇಶಿಕರು **ವೇದಾಂತವಿಹಿತಂ, ನ ವೇದಾಂತೋತ್ಪಾದಿತ**

ಮಿತ್ಯರ್ಥಃ ಎಂದು ಹೇಳಿರುವುದನ್ನು ಗಮನಿಸಬೇಕು. ಉಪನಿಷತ್ತುಗಳಿಂದೇ ಗೀತೆ ಹುಟ್ಟಿಕೊಂಡು ಬಂದಿತೆಂದಲ್ಲ; ಗೀತೆಯು ಉಪನಿಷತ್ತುಗಳ ನೆಲೆ-ನಿಲುವು-ಧೋರಣೆಗೆ ಹೊಂದಿಕೊಂಡಿದೆಯೆಂದು ಸೂಚನೆ. ಗೀತೆಯು ಉಪನಿಷತ್ತುಗಳಿಂದಲೇ ಮೂಡಿಕೊಂಡು ಬಂದಿದ್ದರೆ ಅದು ಪ್ರತ್ಯೇಕವಾದ ಪ್ರಸ್ಥಾನವೆಂದಾಗುತ್ತಿರಲಿಲ್ಲ.

ಉಪನಿಷತ್ತುಗಳಲ್ಲಿ ಎದ್ದುಕಾಣುವ ಅಧ್ಯಾತ್ಮಯೋಗದ ವಿಸ್ತಾರವಾದ ವಿವರಣೆಯನ್ನು ಗೀತೆಯಲ್ಲಿ ಕಾಣಬಹುದು. ಶ್ವೇತಾಶ್ವತರ (೨-೧೧) ದಲ್ಲಿ ಬರುವ **ಅಧ್ಯಾತ್ಮ ಯೋಗಾಧಿಗಮೇನ** ಎಂಬ ಸಾಧನೆಯ ಸೂಚನೆ ಗೀತೆಯಲ್ಲಿ ಪ್ರಧಾನವಾಗಿದೆ. ಬೃಹದಾರಣ್ಯಕದ (೨-೪-೪-೫ ಮತ್ತು ೪-೫-೫-೬) ಒಳಗಿನ ಬೆಳಕನ್ನು ಕಂಡುಕೊಳ್ಳುವ ನಿದಿಧ್ಯಾಸನವೆಂಬ ಸಾಧನೆಯು ಗೀತೆಯಲ್ಲಿ ಹಲವು ಪ್ರಕಾರಗಳಲ್ಲಿ ಕಾಣಸಿಗುತ್ತದೆ. ಛಾಂದೋಗ್ಯದಲ್ಲಿ (೮-೩-೧) ಬಂದಿರುವ 'ಅಕ್ಷೇತ್ರಜ್ಞ'ರು ಬ್ರಹ್ಮನಿರವನ್ನು ಅರಿಯಲಾರರು ಎಂಬ ಒಕ್ಕಣೆಯು ಗೀತೆಯಲ್ಲಿ ಕ್ಷೇತ್ರ-ಕ್ಷೇತ್ರಜ್ಞ ವಿಭಾಗವೆಂದು ಹರಡಿಕೊಂಡು ಬಂದಿದೆ. ಮೈತ್ರಾಯಣೀಯದಲ್ಲಿ (೨-೫) ಪ್ರಕೃತಿಪುರುಷ ಸಂಜ್ಞನಾದ ಕ್ಷೇತ್ರಜ್ಞನ ಉಲ್ಲೇಖವಿರುವುದನ್ನೂ ಇದರ ಹಿನ್ನೆಲೆಯಾಗಿ ಗಮನಿಸಬಹುದು. ಈಶಾವಾಸ್ಯದ **ಕುರ್ವನ್ನೇವೇಹ ಕರ್ಮಾಣಿ** ಎಂಬ ಆದೇಶವೇ ಗೀತೆಯ ಕರ್ಮಯೋಗದ ಬೀಜವೆನ್ನಬೇಕು; **ಕುರು ಕರ್ಮೈವ ತ್ವಂ, ಕರ್ಮ ಜ್ಯಾಯೋ ಹ್ಯಕರ್ಮಣಃ** ಎನ್ನುವ ಗೀತೆಯ ಮಾತು ಈಶಾವಾಸ್ಯದ ಮಾತಿನ ವಿವರಣೆಯೇ. ಶ್ವೇತಾಶ್ವತರದಲ್ಲಿ (೩-೧೭) ಲೋಕವಿಲಕ್ಷಣನಾಗಿರುವ ಪರಮ ಪುರುಷನೆಂದು ಹೇಳಿರುವುದೇ ವಿಶ್ವರೂಪದರ್ಶನಯೋಗದ ಧ್ವನಿಯಾಗಿದೆ.

ಕಠೋಪನಿಷತ್ತಿನಲ್ಲಿ (೧-೩-೧೦) ಕಾಣಸಿಗುವ ರಥರೂಪಕದ ಉಪಬೃಂಹಣವೇ ಗೀತೆಯ ಸಂದರ್ಭ—

**ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ತು।**
**ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ।**
**ಇಂದ್ರಿಯಾಣಿ ಹಯಾನಾಹುಃ ವಿಷಯಾಂಸ್ತೇಷು ಗೋಚರಾನ್॥**

ಇಲ್ಲಿ ಆತ್ಮನೇ ರಥದ ಮಾಲಿಕನೆಂದರೆ ಅರ್ಜುನ; ರಥವೆಂಬುದು ಶರೀರವೇ, ಕ್ಷೇತ್ರವಾಗಿರುವುದು; ಹೃದ್ದೇಶದಲ್ಲಿರುವವನು, ತನ್ನ ಮಾಯೆಯಿಂದ ಎಲ್ಲವನ್ನೂ ಯಂತ್ರದಲ್ಲಿ ತಿರುಗಿಸುವಂತೆ ಮಾಡುವವನು, ಬುದ್ಧಿಸ್ಥಾನೀಯನಾದವನು ಪಾರ್ಥಸಾರಥಿಯಾದ ಕೃಷ್ಣನೇ. ಉಳಿದ ವಿವರಗಳಂತೂ ಸರಿಯೇ ಸರಿ. ಇಂದ್ರಿಯ ಸಂಯಮ, ಮನೋನಿಗ್ರಹಗಳು ಗೀತೆಯಲ್ಲಿ ಹಾಸುಹೊಕ್ಕಾಗಿ ಬರುವ ವಿವರಗಳೆ. ಗೀತೆಯಲ್ಲಿ **ಬುದ್ಧೌ ಶರಣಂ ಅನ್ವಿಚ್ಛ, ಬುದ್ಧಿಯೋಗಂ ದದಾಮ್ಯಹಂ** ಎಂದು ಮುಂತಾಗಿ ಬರುವ ಮಾತುಗಳನ್ನು ಈ ನೆಲೆಯಲ್ಲಿಯೇ ಪರಿಶೀಲಿಸಬೇಕು. ಕಠೋಪನಿಷತ್ತಿನಲ್ಲಿ (೨-೩-೯, ೧೦) ಬಂದಿರುವ ಮನೀಷೆ, ತೈತ್ತಿರೀಯದಲ್ಲಿ (೨-೫-೧ಚ ೩-೫-೧) ಕಾಣಸಿಗುವ ವಿಜ್ಞಾನ, ಛಾಂದೋಗ್ಯದಲ್ಲಿನ (೭-೨೬-೨)

ಸತ್ತ್ವ, ಕೇನದಲ್ಲಿನ (೨-೪) ಪ್ರತಿಬೋಧ ಇವೆಲ್ಲ ಗೀತೆಯ ಬುದ್ಧಿಯೋಗದ ಪರ್ಯಾಯಗಳೇ.

ಮೇಲಾಗಿ, ಗೀತೆಯಲ್ಲಿ ಭಗವಂತನಾಗಿ ತೋರಿಕೊಳ್ಳುವ ಕೃಷ್ಣನು ತಾನೇ ಎಲ್ಲವೂ, ತನ್ನಿಂದಲೇ ಎಲ್ಲವೂ, ಎಲ್ಲಕ್ಕೂ ನಿಯಾಮಕನು ತಾನೇ, ತನ್ನನ್ನು ಬಿಟ್ಟು ಬೇರೆ ಏನೂ ಇರದು ಎಂದು ಸರ್ವಾತ್ಮಭಾವದಿಂದ ಹೇಳಿಕೊಳ್ಳುವುದನ್ನು (ತತ್ರಾಪಿ ೪-೮; ೬-೨೦ ಮತ್ತು ೨೮; ೧೦-೪೧) **ಶಾಸ್ತ್ರದೃಷ್ಟ್ಯಾ ತೂಪದೇಶಃ** ಎನ್ನುವ ವೇದಾಂತಸೂತ್ರದ ನೆಲೆಯಲ್ಲಿಯೇ ಪರಿಶೀಲಿಸಬೇಕು. **ಮಾಮೇಕಂ ಶರಣಂ ವ್ರಜ; ಮತ್ತಃ ಪರತರಂ ನಾಸ್ತಿ; ಗತಿರ್ಭರ್ತಾ ಪ್ರಭುಃ ಸಾಕ್ಷೀ** ಮೊದಲಾದುವೆಲ್ಲ ಯೋಗೇಶ್ವರನಾದ ಕೃಷ್ಣನ ಮಾತುಗಳು; ಶಂಕರರ ಮಾತಿನಲ್ಲಿ ಇದು 'ಆರ್ಷ ದರ್ಶನ'. ಇಂದ್ರನು ಪ್ರತರ್ದನನಿಗೆ **ಮಾಂ ಉಪಾಸ್ಸ** ('ನನ್ನನ್ನೇ ಉಪಾಸನೆಮಾಡು') ಎಂದು ಉಪದೇಶಮಾಡುವಾಗ, ವಾಮದೇವ ಋಷಿಯು ತಾನೇ ರಾಷ್ಟ್ರ ಸಂಗಮನಿ ಎಂದು ಮೊದಲಾಗಿ ತನ್ನ ಮಹಿಮೆಯನ್ನು ತಿಳಿಸುವಾಗ ಅವರೆಲ್ಲ ಇದ್ದ ಸ್ಥಿತಿಯು ಬ್ರಹ್ಮವಸ್ತುವಿನೊಂದಿಗೆ ಅಭೇದವನ್ನು, ತಾದಾತ್ಮ್ಯವನ್ನು ಅನುಭವಿಸುತ್ತ ಇದ್ದುದು. ಇದೇ ಆರ್ಷದರ್ಶನ, ಎಂದರೆ ಋಷಿಗೆ ಸಹಜವಾದ ಸಮಾಧಿಸ್ಥಿತಿಯ ಕಾಣ್ಕೆ. ಕೃಷ್ಣನೂ ಯೋಗೇಶ್ವರನಾಗಿ ಈ ಸ್ಥಿತಿಯಲ್ಲಿದ್ದಾಗಲೇ ಗೀತೋಪದೇಶ ನಡೆದದ್ದು.

ಇದರ ಧ್ವನಿಯನ್ನು ಮಹಾಭಾರತದ ಅಶ್ವಮೇಧಿಕಪರ್ವದಲ್ಲಿ ಕಾಣುತ್ತೇವೆ. ಕುರುಕ್ಷೇತ್ರದ ಯುದ್ಧವೆಲ್ಲ ಮುಗಿದು, ಪಾಂಡವರು ಅಶ್ವಮೇಧಯಾಗವನ್ನೂ ಮುಗಿಸಿದ ಮೇಲೆ ಕೃಷ್ಣನನ್ನು ದ್ವಾರಕೆಗೆ ಬೀಳ್ಕೊಡುವ ಸಂದರ್ಭದಲ್ಲಿ ಅರ್ಜುನನು ಕೃಷ್ಣನ ಬಳಿಗೆ ಬಂದು ಹಿಂದೆ ಯುದ್ಧಾರಂಭದಲ್ಲಿ ತನಗೆ ಮಾಡಿದ ಗೀತೋಪದೇಶವನ್ನು ಮರೆತುಬಿಟ್ಟೆನೆಂದೂ (**ನಷ್ಟಂ ಮೇ ಭ್ರಷ್ಟಚೇತಸಃ**) ಮತ್ತೆ ಅದನ್ನು ತಿಳಿಯಹೇಳಬೇಕೆಂದೂ ಕೇಳುತ್ತಾನೆ. ಆಗ ಕೃಷ್ಣನು ಹೇಳುವ ಮಾತುಗಳು ಇವು: 'ಗುಹ್ಯವಾದ ಆದರೆ ಸನಾತನವಾದ ಉಪದೇಶವನ್ನು ನಾನು ಹೇಳಿದಾಗ ಮನವರಿಕೆ ಮಾಡಿಕೊಳ್ಳದೆ ನನಗೆ ಅಪ್ರಿಯವನ್ನೇ ಮಾಡಿದ್ದೀಯೆ; ನಿನಗೆ ಶ್ರದ್ಧೆಯಿಲ್ಲ , ನಿನ್ನ ಬುದ್ಧಿಯೂ ನೆಟ್ಟಗಿಲ್ಲ (**ನೂನಮ್ ಅಶ್ರದ್ದಧಾನೋऽಸಿ ದುರ್ಮೇಧಾ ಹ್ಯಸಿ**). ಆ ಉಪದೇಶವನ್ನು ಮತ್ತೆ ನಾನು ಹೇಳುವುದು ಹೇಗೆ? ಆಗ ನನಗೆ ಯೋಗಾವೇಶವಿದ್ದಿತು; ದೈವೀಸ್ಥಿತಿಯಲ್ಲಿದ್ದೆ, ಅದನ್ನು ಹೇಳುವುದಾಯಿತು. ಈಗ ಆ ಸ್ಥಿತಿಯಲ್ಲಿ ನಾನಿಲ್ಲ ; ಅದನ್ನು ಮತ್ತೆ ಹಾಗೆಯೇ ಹೇಳುವುದು ನನ್ನಿಂದಾಗದು;

**ನ ಶಕ್ಯಂ ತನ್ಮಯಾ ಭೂಯಸ್ತಥಾ ವಕ್ತುಮಶೇಷತಃ।**
**ಪರಂ ಹಿ ಬ್ರಹ್ಮ ಕಥಿತಂ ಯೋಗಯುಕ್ತೇನ ತನ್ಮಯಾ॥**

ಇದು ಆರ್ಷದರ್ಶನದ ಸಂದರ್ಭ. ಉಪನಿಷತ್ತುಗಳಲ್ಲಿ ಬರುವ ಮಾತುಗಳೆಲ್ಲ ಈ ನೆಲೆಯಲ್ಲೇ ಬಂದಿರುವುವು. ಗೀತೆಯಲ್ಲಿ ಕೃಷ್ಣನ ಮಾತನ್ನೂ ನಾವು ಹೀಗೆಯೇ ಪರಿಗಣಿಸಬೇಕು.॥ ಓಂ ತತ್ ಸತ್॥

# ಪರವಿದ್ಯೆಯ ಗರಿಮೆ!

ವೇ॥ ಬ್ರ॥ ಶ್ರೀ ಕೆ. ಜಿ. ಸುಬ್ರಾಯಶರ್ಮಾ, ಬೆಂಗಳೂರು

ವೇದಗಳೆಂದರೆ ಜ್ಞಾನಸಾಗರ. ವೇದಗಳ ಸಾರವೇ ವೇದಾಂತ—ಉಪನಿಷತ್, ಎಂದರೆ ಬ್ರಹ್ಮವಿದ್ಯೆಯೇ. ಇದನ್ನು ಉಪದೇಶಿಸುವ ಗ್ರಂಥಗಳಿಗೂ ಉಪನಿಷತ್ ಎಂದು ಹೆಸರು. ಇಂಥ ಉಪನಿಷತ್ತುಗಳು ಹದಿನಾಲ್ಕು, ಅವುಗಳಲ್ಲಿ ಮುಂಡಕವೂ ಒಂದು. ಮುಂಡಕ, ಪ್ರಶ್ನ ಮತ್ತು ಮಾಂಡೂಕ್ಯಗಳು ಅಥರ್ವವೇದಕ್ಕೆ ಸೇರಿರುವ ಉಪನಿಷತ್ತುಗಳು. ಭಗವತ್ಪಾದ ಶ್ರೀಶಂಕರರು ಈಶಾದಿ ಹತ್ತು ಉಪನಿಷತ್ತುಗಳಿಗೆ ಭಾಷ್ಯಗಳನ್ನು ಬರೆದಿರುತ್ತಾರೆ.

ಮುಂಡಕೋಪನಿಷತ್ತು ಪರ ಅಥವಾ ಪರಾ ವಿದ್ಯೆ ಎಂದರೆ ಬ್ರಹ್ಮವಿದ್ಯೆ, ಇನ್ನುಳಿದ ಸಕಲ ವಿದ್ಯೆಗಳೂ ಅಪರ ಅಥವಾ ಅಪರಾ ವಿದ್ಯೆ ಎಂದು ವಿಂಗಡಿಸಿದೆ. "ಅಪರಾವಿದ್ಯೆಯೆಂದರೆ ಅವಿದ್ಯೆಯೇ" (ಅಪರಾ ಹಿ ವಿದ್ಯಾ ನಾಮ ಅವಿದ್ಯಾ) ಎಂದು ಶ್ರೀಶಂಕರರ ವ್ಯಾಖ್ಯಾನ. ಈ ಅಪರಾವಿದ್ಯೆಯಲ್ಲಿ ಸಕಲ ವೇದಗಳನ್ನೂ, ವೇದಾಂಗಗಳನ್ನೂ ಸೇರಿಸಿಬಿಟ್ಟಿರುತ್ತದೆ, "ತತ್ರಾಪರಾ ಋಗ್ವೇದೋ....ಜ್ಯೋತಿಷಮ್ ಇತಿ" ಎಂದು ಧೈರ್ಯವಾಗಿ ಈ ಉಪನಿಷತ್ತು ಸಾರುತ್ತಿದೆ. ಭಗವಂತನ ವಾಣಿಯೆಂದೂ ಅಪೌರುಷೇಯವೆಂದೂ ಪ್ರಸಿದ್ಧವಾಗಿರುವ ಈ ವೇದಗಳು ಅಪರಾವಿದ್ಯೆಯೇ? ಎನ್ನುವಲ್ಲಿ ಆಶ್ಚರ್ಯವಿಲ್ಲ. ಶ್ರೀಶಂಕರರು ಈ ಮಂತ್ರೋಪದೇಶದ ರಹಸ್ಯವನ್ನು ತಮ್ಮ ಭಾಷ್ಯದಲ್ಲಿ ಸರಳವಾಗಿ ಹಾಗೂ ಸುಂದರವಾಗಿ ತಿಳಿಸಿರುತ್ತಾರೆ. ಬರೀ ಶಬ್ದರಾಶಿಯಾಗಿರುವ ವೇದವೇದಾಂಗಗಳನ್ನು ಇಲ್ಲಿ ಅಪರಾವಿದ್ಯೆಯೆಂದು ಕರೆದಿದೆ.

ಇಲ್ಲಿ ವೇದಗಳೆಂದರೆ ವೇದಮಂತ್ರಗಳು, ವೇದಪ್ರತಿಪಾದ್ಯರಾದ ಸೋಪಾಧಿಕ ದೇವತೆಗಳು, ವೇದೋಕ್ತ ಕರ್ಮಾನುಷ್ಠಾನಗಳು ಮತ್ತು ಕರ್ಮಫಲಗಳಾದ ಸ್ವರ್ಗಾದಿಗಳು—ಇಷ್ಟನ್ನೂ ತೆಗೆದುಕೊಳ್ಳಬೇಕು. ಈ ಭೇದಜ್ಞಾನವೆಲ್ಲವೂ ಅವಿದ್ಯಾವಿಲಾಸವೇ ಅಲ್ಲವೆ? ಅಧ್ಯಾಸದಿಂದಲೇ ಈ ವೈದಿಕವ್ಯವಹಾರಗಳೂ ಸಾಗುತ್ತಿವೆ!

ಗೀತಾಚಾರ್ಯನಾದ ಶ್ರೀಕೃಷ್ಣಭಗವಂತನು **ತ್ರೈಗುಣ್ಯವಿಷಯಾ ವೇದಾಃ ನಿಸ್ತ್ರೈಗುಣ್ಯೋ ಭವಾರ್ಜುನ** ಸತ್ತ್ವ, ರಜಸ್, ತಮಸ್—ಎಂಬ ತ್ರಿಗುಣಗಳಿಂದಲೇ ಈ ವೇದರಾಶಿಗಳೂ ತುಂಬಿಹೋಗಿವೆ—ಎಂದು ತಿಳಿಸಿದ್ದಾನೆ. ತ್ರಿಗುಣಗಳನ್ನು ಮೀರಿರುವ ಪರತತ್ತ್ವವನ್ನು ತಿಳಿಸುವ ವಿದ್ಯೆಯೇ ಪರವಿದ್ಯೆ, ವೇದರಾಶಿಗಳ ಸಾರವಾಗಿರುವ ವೇದಾಂತಗಳಲ್ಲಿ ಪ್ರತಿಪಾದಿತವಾಗಿರುವ ತತ್ತ್ವವೇ ಬ್ರಹ್ಮತತ್ತ್ವ—ಅಕ್ಷರ, ಪುರುಷ, ಸತ್ಯ, ಈಶ್ವರ, ವಿಷ್ಣು ಎಂದೆಲ್ಲ ಕರೆಯುವ ಪರಿಪೂರ್ಣವಾಗಿರುವ, ನಿರ್ವಿಶೇಷವಾಗಿರುವ, ಅದ್ವಿತೀಯವಾದ ತತ್ತ್ವ. ಇದಕ್ಕೇ ಬ್ರಹ್ಮವಿದ್ಯೆಯೆಂದೂ ಹೆಸರು. ಬ್ರಹ್ಮವಿದ್ಯೆಯೇ ಸಕಲ ವಿದ್ಯೆಗಳ ಸಾರ, ಸಕಲ ಶಾಸ್ತ್ರಗಳ

ಸಾರ, ಮಾನವ ಜನ್ಮದ ಗುರಿ, ಮುಕ್ತಿಗೆ ಸಾಧನ. ಬ್ರಹ್ಮವಿದ್ಯೆಯಿಂದಲೇ ಅವಿದ್ಯಾ ನಿವೃತ್ತಿ, ದುಃಖನಿವೃತ್ತಿ ಮತ್ತು ಜನ್ಮಮರಣ ಚಕ್ರದ ಧ್ವಂಸ! ಎಂದು ಮುಂಡಕ ಉಪನಿಷತ್ತು ಬ್ರಹ್ಮವಿದ್ಯೆಯ ಮಹಿಮೆಯನ್ನೂ ಪ್ರಾಪ್ತಿಗೆ ಸಾಧನಗಳನ್ನೂ ಉಪದೇಶಿಸುತ್ತಿದೆ.

ಈ ಉಪನಿಷತ್ತಿನಲ್ಲಿ "ಸ ಬ್ರಹ್ಮವಿದ್ಯಾಂ ಸರ್ವವಿದ್ಯಾ ಪ್ರತಿಷ್ಠಾಮ್", "ಪುರೋವಾಚ ಅಂಗಿರೇ ಬ್ರಹ್ಮವಿದ್ಯಾಮ್; "ಪ್ರೋವಾಚ ತಾಂ ತತ್ತ್ವತೋ ಬ್ರಹ್ಮವಿದ್ಯಾಮ್" ಎಂದು ಮೂರು ಬಾರಿ ಬ್ರಹ್ಮವಿದ್ಯಾಂ ಎಂದು ಹೇಳುತ್ತಿದೆ. ಬ್ರಹ್ಮವಿದ್ಯೆಯೇ ಸಕಲ ವೇದಾಂತಗಳ ಸಂದೇಶ, ಬ್ರಹ್ಮವಿದ್ಯೆಯಿಂದಲೇ ಮುಕ್ತಿ, ಬ್ರಹ್ಮವಿದ್ಯೆಯೇ ಮಾನವ ಜನ್ಮದ ಗುರಿ; ಬ್ರಹ್ಮವಿದ್ಯೆಯಿಂದಲೇ ಸಕಲ ದುಃಖ ನಿವೃತ್ತಿ. ಬ್ರಹ್ಮಶಬ್ದಕ್ಕೆ ಐದು ಅರ್ಥಗಳು: ವೇದ, ಪರತತ್ತ್ವ, ತಪಸ್ಸು, ಬ್ರಾಹ್ಮಣ, ಹಿರಣ್ಯಗರ್ಭ. "ವೇದಸ್ತತ್ತ್ವಂ ತಪೋ ಬ್ರಹ್ಮ ಬ್ರಹ್ಮಾ ವಿಪ್ರಃ ಪ್ರಜಾಪತಿಃ" ಎಂದು ಅಮರಕೋಶ. ಇನ್ನು ಬ್ರಹ್ಮವಿದ್ಯೆಯೆಂದರೆ ಹತ್ತು ಅರ್ಥಗಳು.

೧. ಬ್ರಹ್ಮಣೇ (ಹಿರಣ್ಯಗರ್ಭಾಯ) ಪ್ರತ್ತಾ ವಿದ್ಯಾ = ಬ್ರಹ್ಮವಿದ್ಯಾ; ಹಿರಣ್ಯ ಗರ್ಭನಿಗೆ ಕೊಡಲ್ಪಟ್ಟ ವಿದ್ಯೆಯೇ ಬ್ರಹ್ಮವಿದ್ಯಾ. ಬ್ರಹ್ಮವಿದ್ಯೆಯನ್ನು ಮೊಟ್ಟ ಮೊದಲಿಗೆ ಬ್ರಹ್ಮನಿಗೆ ಪರಮಾತ್ಮನು ಕೊಟ್ಟನು ಎಂದರ್ಥ.

೨. ಬ್ರಹ್ಮಣಾ ಪರೇಣ ಪ್ರತ್ತಾ ವಿದ್ಯಾ = ಬ್ರಹ್ಮವಿದ್ಯಾ. ಪರಬ್ರಹ್ಮದಿಂದ ಕೊಡಲ್ಪಟ್ಟದ್ದರಿಂದಲೂ ಬ್ರಹ್ಮವಿದ್ಯೆಯೆನಿಸಿದೆ. ಬ್ರಹ್ಮವಿದ್ಯೆಯನ್ನು ಪರ ಬ್ರಹ್ಮವೇ ಮೊದಲಿಗೆ ಹಿರಣ್ಯಗರ್ಭನಿಗೆ ಅನುಗ್ರಹಮಾಡಿತು ಎಂದರ್ಥ. ಪರಮಾತ್ಮನಿಂದಲೇ ಪ್ರಾರಂಭಿಸಲ್ಪಟ್ಟದ್ದು, ಕೊಡಲ್ಪಟ್ಟದ್ದು ಈ ಬ್ರಹ್ಮವಿದ್ಯೆ ಎಂದರ್ಥ.

೩. ಬ್ರಹ್ಮಣಃ ಪರಸ್ಯ ವಿದ್ಯಾ = ಬ್ರಹ್ಮವಿದ್ಯಾ. ಪರಬ್ರಹ್ಮದ ವಿದ್ಯೆ ಬ್ರಹ್ಮವಿದ್ಯೆ. ಪರಬ್ರಹ್ಮತತ್ತ್ವದ ವಿದ್ಯೆಯು ಬ್ರಹ್ಮವಿದ್ಯೆಯು. ಪರಬ್ರಹ್ಮವನ್ನು ಕುರಿತ ವಿದ್ಯೆ ಎಂದರ್ಥ.

೪. ಪರಸ್ಮೈ ಬ್ರಹ್ಮಣೇ ವಿದ್ಯಾ = ಬ್ರಹ್ಮವಿದ್ಯಾ; ಪರಬ್ರಹ್ಮಪ್ರಾಪ್ತಿಗಾಗಿ ಹೊರಟ ವಿದ್ಯೆಯೇ ಬ್ರಹ್ಮವಿದ್ಯೆ. ಪರಪ್ರಾಪ್ತಿಯೇ ಎಂದರೆ ಮೋಕ್ಷವೇ ಬ್ರಹ್ಮವಿದ್ಯೆಗೆ ಫಲ ಎಂದರ್ಥ.

೫. ಬ್ರಹ್ಮಣಃ ಪರಸ್ಮಾತ್ ಆಗತಾ ವಿದ್ಯಾ ಬ್ರಹ್ಮವಿದ್ಯಾ. ಪರಮಾತ್ಮನ ಮುಖಾರ ವಿಂದದಿಂದಲೇ ಹೊರಹೊಮ್ಮಿರುವ ವಿದ್ಯೆ ಬ್ರಹ್ಮವಿದ್ಯೆ. ವೇದಗಳಂತೆಯೇ ಬ್ರಹ್ಮವಿದ್ಯೆಯೂ ಅಪೌರುಷೇಯ. ಬ್ರಹ್ಮವಿದ್ಯೆಯು ಭಗವಂತನ ಪ್ರಾಸಾದಿಕ ವಿದ್ಯೆ ಎಂದರ್ಥ.

೭. ಬ್ರಹ್ಮಣಿ ವೇದೇ ಪ್ರತಿಷ್ಠಿತಾ ವಿದ್ಯಾ = ಬ್ರಹ್ಮವಿದ್ಯಾ. ಬ್ರಹ್ಮದಲ್ಲಿ ಎಂದರೆ ವೇದದಲ್ಲಿ ಪ್ರತಿಪಾದಿತವಾಗಿರುವ ವಿದ್ಯೆ ಬ್ರಹ್ಮವಿದ್ಯೆ. ಪರಮಾತ್ಮನ ಉಸಿರಾಗಿರುವ ವೇದಗಳಲ್ಲಿ ಪ್ರತಿಪಾದಿತವಾಗಿರುವ ವಿದ್ಯೆಯೇ ಬ್ರಹ್ಮವಿದ್ಯೆ.

೭. ಬ್ರಹ್ಮಣಾ, ತಪಸಾ ಪ್ರಾಪ್ತವ್ಯಾ ವಿದ್ಯಾ = ಬ್ರಹ್ಮವಿದ್ಯಾ; ತಪೋರೂಪವಾದ ಬ್ರಹ್ಮದಿಂದ ಪಡೆಯಲ್ಪಡಬಹುದಾದ ವಿದ್ಯೆಯು ಬ್ರಹ್ಮವಿದ್ಯೆ. ಶಮದಮಾದಿ ಗಳು, ಸತ್ಯಬ್ರಹ್ಮಚರ್ಯಾದಿಗಳು, ಸದ್ಗುರು ಸೇವಾದಿಗಳು, ಶ್ರವಣಾದಿಗಳು ಮುಂತಾದ ತಪಸ್ಸಿನಿಂದಲೇ ಬ್ರಹ್ಮವಿದ್ಯೆಯು ದಕ್ಕಬೇಕೇ ಹೊರತು ಕೇವಲ ಪುಸ್ತಕಗಳನ್ನು ಓದುವುದರಿಂದ ಸಾಧ್ಯವಿಲ್ಲ.

೮. ಬ್ರಹ್ಮಣಾಂ ವಿಪ್ರಾಣಾಂ ವಿದ್ಯಾ = ಬ್ರಹ್ಮವಿದ್ಯಾ. ಬ್ರಾಹ್ಮಣರ ವಿದ್ಯೆ ಬ್ರಹ್ಮವಿದ್ಯೆ. ಬ್ರಾಹ್ಮಣರು ಅವಶ್ಯವಾಗಿ ಸಂಪಾದಿಸಲೇ ಬೇಕಾಗಿರುವ ವಿದ್ಯೆ ಬ್ರಹ್ಮವಿದ್ಯೆ. ಬ್ರಹ್ಮಜ್ಞಾನದಿಂದಲೇ ಅನ್ವರ್ಥ ಬ್ರಾಹ್ಮಣ್ಯ. ಬ್ರಹ್ಮವಿದನೇ ನಿಜವಾದ ಬ್ರಾಹ್ಮಣ ಎಂದರ್ಥ.

೯. ಬ್ರಹ್ಮಾರ್ಥಂ ವಿದ್ಯಾ ಬ್ರಹ್ಮವಿದ್ಯಾ. ಬ್ರಹ್ಮಪ್ರಾಪ್ತಿಗಾಗಿ ಹೊರಟಿರುವ ವಿದ್ಯೆ ಬ್ರಹ್ಮವಿದ್ಯೆ. ಈ ವಿದ್ಯೆಯಿಂದ ಉಂಟಾಗುವ ಫಲವೆಂದರೆ ಬ್ರಹ್ಮವೇ. ಬ್ರಹ್ಮ ವಿದ್ಯೆಯಿಂದ ಮಾನವನು ಬ್ರಹ್ಮವೇ ಆಗಿ ಬಿಡುತ್ತಾನೆ ಎಂದರ್ಥ. ಬ್ರಹ್ಮ ವಿದ್ಯೆಯಿಂದ ಧನಖ್ಯಾತಿಗೌರವಾದಿಗಳು ದೊರಕುವುದಿಲ್ಲ, ಮತ್ತೇನೆಂದರೆ ಬ್ರಹ್ಮಪ್ರಾಪ್ತಿಯೇ ಆಗುತ್ತದೆ.

೧೦. ಬ್ರಹ್ಮ ಚ ಅಸೌ ವಿದ್ಯಾ ಚ ಬ್ರಹ್ಮವಿದ್ಯಾ. ಬ್ರಹ್ಮರೂಪವಾದ ವಿದ್ಯೆಯೇ ಬ್ರಹ್ಮವಿದ್ಯೆ. ಬ್ರಹ್ಮೈವ ವಿದ್ಯಾ ಬ್ರಹ್ಮವಿದ್ಯಾ, ಬ್ರಹ್ಮವೇ ಬ್ರಹ್ಮವಿದ್ಯೆ. ಬ್ರಹ್ಮಕ್ಕಿಂತ ಭಿನ್ನವಲ್ಲದ್ದು ಬ್ರಹ್ಮವಿದ್ಯೆ. ಬ್ರಹ್ಮವೆಂದರೂ ವಿದ್ಯೆಯೆಂದರೂ ನಿಜವಾಗಿ ಒಂದೇ ತತ್ತ್ವ.

ಪರಮಾತ್ಮನಿಂದ ಉಪದೇಶಿಸಲ್ಪಟ್ಟಿರುವ, ಬ್ರಹ್ಮದೇವನಿಂದ ಸ್ವೀಕರಿಸ ಲ್ಪಟ್ಟಿರುವ, ವೇದಗಳಲ್ಲಿ ತಾತ್ಪರ್ಯದಿಂದ ಪ್ರತಿಪಾದಿಸಲ್ಪಟ್ಟಿರುವ, ತಪಸ್ಸಿನಿಂದ ಮಾತ್ರವೇ ಸ್ವಾಧೀನವಾಗುವ, ಬ್ರಹ್ಮದ ವಿಷಯಕವಾಗಿರುವ, ಪರಬ್ರಹ್ಮದ ಪ್ರಾಪ್ತಿಗೆ ಸಾಧನವಾಗಿರುವ, ಅನ್ವರ್ಥ ಬ್ರಾಹ್ಮಣ್ಯವನ್ನು ಉಂಟುಮಾಡುವ, ಪರಬ್ರಹ್ಮ ಸ್ವರೂಪವೇ ಆಗಿರುವ ಜನ್ಮಸಾರ್ಥಕ ಬ್ರಹ್ಮವಿದ್ಯೆಯನ್ನು ಸದ್ಗುರುಕೃಪೆಯಿಂದ ನಾವುಗಳು ಹೊಂದುವಂತಾಗಲಿ.

॥ ನಮೋ ಗುರುಭ್ಯಃ ನಮಃ ಪರಮಗುರುಭ್ಯಃ ॥

೧೮-೪-೦೪ ರಂದು ಹೊಳೇನರಸೀಪುರದಲ್ಲಿ ಮಾಡಿದ ಉಪನ್ಯಾಸದ ಸಾರ.

# ಬ್ರಾಹ್ಮಣತ್ವದ ಜೀವನ

ಎಂ. ವಿ. ರಾಮಚಂದ್ರ
೩೦೬, ೨೬ನೇ ಕ್ರಾಸ್, ೯ನೇ ಮೈನ್, ಬನಶಂಕರಿ ೨ನೇ ಹಂತ, ಬೆಂಗಳೂರು-೭೦
ದೂರವಾಣಿ ೨೬೭೧೫೫೫೮

ನಮ್ಮ ಸಮಾಜದಲ್ಲಿ ನಾಲ್ಕು ವರ್ಣಗಳುಂಟು. ಇದು ಅನಾದಿ ಕಾಲದಿಂದಲೂ ಬಂದಿದೆ. ಈಗ್ಗೆ ಸುಮಾರು ೫೦-೬೦ ವರ್ಷಗಳ ಕೆಳಗೆ ಸ್ವಲ್ಪವಾದರೂ ಜನ ಇದನ್ನು ಅನುಸರಿಸುತ್ತಿದ್ದರು. ಕಾಲಕ್ರಮೇಣ ಈ ಪದ್ಧತಿ ಕ್ಷೀಣವಾಗಲು ಸಮಾಜದ ಎಲ್ಲ ವರ್ಣಗಳೂ ಕಷ್ಟಕ್ಕೀಡಾದವು. ಅದಕ್ಕೆ ಪರಿಹಾರವನ್ನು ಕಾಣಲು ಕಷ್ಟವಾಗಿ ಸಕಲರೂ ತೊಳಲುತ್ತಿದ್ದಾರೆ. ಈ ಕಾಲದಲ್ಲಿ ನಮ್ಮ ಯುವಕರಿಗೆ ಅತಿ ಹೆಚ್ಚು ಸಂಬಳವೇನೋ ದೊರಕುತ್ತಿದೆ. ಕಾರಣ ಸಾಫ್ಟ್‌ವೇರಿನವರು ಹೆಚ್ಚಿನ ಸಂಬಳ ಕೊಡುವುದು. ಅದಕ್ಕೆ ಅನುಗುಣವಾಗಿ ಯುವಕರೂ ಸಹ ತಮ್ಮ ಬ್ರಾಹ್ಮಣ ಧರ್ಮವನ್ನು ಅನುಸರಿಸಬೇಕು ಆದಷ್ಟು ಮಟ್ಟಿಗೆ.

ಈ ವಿಷಯದ ಬಗ್ಗೆ ಆಚಾರ್ಯ ಶಂಕರರು ಭಗವದ್ಗೀತೆಯ ಉಪೋದ್ಘಾತ ದಲ್ಲಿ ತುಂಬಾ ಗಮನಿಸಬೇಕಾದ ಕೆಲವು ವಿಷಯಗಳನ್ನು ಅನುಗ್ರಹಿಸಿರುತ್ತಾರೆ:

"ಈ ಜಗತ್ತಿನ ಸ್ಥಿತಿಗೆ ಕಾರಣವಾಗಿ ಮತ್ತು ಸಕಲ ಪ್ರಾಣಿಗಳ ಅಭ್ಯುದಯ ನಿಃಶ್ರೇಯಸಕ್ಕೂ ನೇರಾಗಿ ಕಾರಣವಾಗಿರುವ ಪ್ರವೃತ್ತಿ ಲಕ್ಷಣ ಮತ್ತು ನಿವೃತ್ತಿ ಲಕ್ಷಣಗಳೆಂಬ ಎರಡು ಬಗೆಯ ಧರ್ಮಗಳನ್ನು ವೇದದಲ್ಲಿ ಹೇಳಿದೆ. ಅಂಥ ಈ ಧರ್ಮವನ್ನು ಒಳ್ಳೆಯದನ್ನೇ ಕೋರುವ ಬ್ರಾಹ್ಮಣರೇ ಮುಂತಾದ ವರ್ಣಗಳಿಂದಲೂ ಬ್ರಹ್ಮಚಾರಿಗಳೇ ಮೊದಲಾದ ಆಶ್ರಮಗಳಿಂದಲೂ ಅನುಸರಿಸುತ್ತಿದ್ದು, ಬಹುಕಾಲದ ನಂತರ ಅವರುಗಳಿಗೆ ವಿವೇಕ ಜ್ಞಾನವು ನಷ್ಟವಾಗಿ ಕಾಮವುಂಟಾಗಿ ಅಧರ್ಮದಿಂದ ಧರ್ಮವು ಮುಚ್ಚಿಹೋಯಿತು. ಬ್ರಾಹ್ಮಣ್ಯವನ್ನು ಕಾಪಾಡಿದರೆ ವೈದಿಕಧರ್ಮವನ್ನು ಉಳಿಸಿದಂತೆ. ಆಗ ಸಮಾಜವೂ ಕೂಡ ಉತ್ತಮ ಸ್ಥಿತಿಯಲ್ಲಿದ್ದು ಎಲ್ಲರಲ್ಲೂ ಸುಖಶಾಂತಿಗಳು ನೆಲೆಸುತ್ತವೆ. ಅಂಥ ಬ್ರಾಹ್ಮಣನು ಎಲ್ಲ ಜನಗಳಿಗೂ ಹಿತವನ್ನು ಬೋಧಿಸುತ್ತಾನೆ."

ಮಹಾಭಾರತದಲ್ಲಿ ಶ್ರೇಷ್ಠವಾದ ಎಲ್ಲರೂ ಮೆಚ್ಚಬೇಕಾದ ಒಂದು ಹೇಳಿಕೆಯುಂಟು.

**ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ।**
**ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ**

ಸಮಾಜದಲ್ಲಿ ಶ್ರೇಷ್ಠನೆಂದು ಗಣಿಸಲ್ಪಟ್ಟವನು ಯಾವಯಾವುದನ್ನು ಆಚರಿ ಸುವನೋ ಅದನ್ನೇ ಉಳಿದ ಜನರೂ ಅವನನ್ನೇ ಮೇಲ್ಪಂಕ್ತಿಯಾಗಿ ಅನುಸರಿಸುವರು. ಆದ್ದರಿಂದ ಸಮಾಜದಲ್ಲಿ ಮುಖ್ಯಸ್ಥನಾಗಿರುವವನಿಗೆ ದೊಡ್ಡ ಜವಾಬ್ದಾರಿಯುಂಟು.

ಅನೇಕರು ಸಮಾಜವು ಕೆಟ್ಟುಹೋಯಿತೆನ್ನುವರು. ಅದಕ್ಕೆ ಮುಖ್ಯ ಕಾರಣ ಸಮಾಜಕ್ಕೆ ಲೀಡರ್ ಎನಿಸುವ ಎಲ್ಲವನ್ನೂ ಅಂದರೆ ಧರ್ಮವನ್ನು ಬಲ್ಲ ಬ್ರಾಹ್ಮಣರೇ. ಈ ಧರ್ಮ ವಿಚಾರಗಳನ್ನು ವಿವರವಾಗಿ ಧರ್ಮಶಾಸ್ತ್ರಗಳು (ಮನುಧರ್ಮಶಾಸ್ತ್ರವೇ ಮುಂತಾದವು), ರಾಮಾಯಣ, ಮಹಾಭಾರತ ಇಂಥ ಉದ್ಗ್ರಂಥಗಲ್ಲಿ ಸಾಕಷ್ಟು ಹೇಳಿರುವುದುಂಟು. ಇವುಗಳ ವಾಚನ ಮತ್ತು ಶ್ರವಣ ಬಹಳ ಮುಖ್ಯ.

ಬ್ರಾಹ್ಮಣನಾದವನು ಸಮಾಜದ ಎಲ್ಲ ವರ್ಣದವರ ಜೀವನೋಪಾಯಗಳನ್ನು ತಾನು ವಿಧಿವತ್ತಾಗಿ ತಿಳಿದು, ತನ್ನ ನಿಯಮಗಳನ್ನು ತಾನು ಅನುಸರಿಸುತ್ತಾ ಇತರರಿಗೆ ಅವರವರ ವಿಹಿತ ಜೀವನೋಪಾಯಗಳ ಬಗೆಗೆ ತಿಳುವಳಿಕೆ ಕೊಡಬೇಕೆಂದು ವಿಧಿಸಿದೆ. ಸಮಾಜವು ಸುಸ್ಥಿತಿವಾಗಿ ನಿಲ್ಲಬೇಕಾದರೆ ಧರ್ಮದ ಅಡಿಗಲ್ಲು ಇರಬೇಕು. "ಆಚಾರಃ ಪರಮೋ ಧರ್ಮಃ" ಎಂಬ ಬರೇ ಬೋಧನೆಯೇ ಅಲ್ಲದೆ ಅದು ಆಚರಣೆಯಲ್ಲೂ ಇರಬೇಕು ಎಂದು ನಮ್ಮ ಹಿರಿಯರು ಹೇಳಿದರು. ಧರ್ಮಕೋಶದ ರಕ್ಷಣೆಗಾಗಿಯೇ ಬ್ರಾಹ್ಮಣರು ಪ್ರತಿಯೊಬ್ಬರೂ ದುಡಿಯಬೇಕು. ಮೊದಲು ತಾವು ಆಚರಿಸಬೇಕು. ಯಾವಾಗಲೂ ಸದಾಚಾರದಲ್ಲಿ ಪ್ರಯತ್ನಶೀಲನಾಗಿರಬೇಕು.

ಜನಗಳ ಮನಸ್ಸಿನಲ್ಲಿ ಒಂದು ಭಾವನೆಯಿರಬಹುದು. ಈ ಮೇಲೆ ಹೇಳಿದ ಜೀವನ ರೀತಿ ಸಾಧ್ಯವೇ? ಜನಗಳು ಸತ್ಯದ ಆಧಾರದ ಮೇಲಿರಬೇಕೆಂದು ಹೇಳುತ್ತಾರೆ. ಹಾಗಿಲ್ಲದಿದ್ದರೆ ಸಮಾಜವು ನಾಶವಾಗಿ ಹೋಗಿಬಿಡುತ್ತದೆ. ಅದಕ್ಕೆ ಬ್ರಾಹ್ಮಣರು ಅವಕಾಶ ಕೊಡಬಾರದು. ತಮ್ಮ ಜವಾಬ್ದಾರಿಯನ್ನು ಸಮಾಜದಲ್ಲಿ ಅರಿಯಬೇಕು. ಈಗ್ಗೆ ಕೆಲವು ದಿನಗಳ ಕೆಳಗೆ ನಮ್ಮ ದೇಶದ ಕೋರಿಕೆಯಂತೆ ಅಥವಾ ನಮ್ಮ ದೇಶದ ಸಣ್ಣಕೈಗಾರಿಕೆಗಳ ಆಹ್ವಾನದಿಂದ ಅವರೊಡನೆ ತಾವೂ ಕೂಡ ಕಲೆತು ಕೈಗಾರಿಕೆಯನ್ನು ನಡೆಸಬೇಕೆಂದು ಜಪಾನು ದೇಶದ ಸಣ್ಣ ಕೈಗಾರಿಕೆಗಳ ಸಂಸ್ಥೆಯವರು ಇಲ್ಲಿಯ ಸಣ್ಣ ಕೈಗಾರಿಕೆಗಳ ಸ್ಥಿತಿಗತಿಗಳನ್ನು ಪರೀಕ್ಷಿಸಲೆಂದು ದೇಶದಲ್ಲೆಲ್ಲಾ ಪ್ರಯಾಣ ಮಾಡಿದರು. ಕೊನೆಗೆ ಚೆನ್ನೈನಿಂದ ತಮ್ಮ ದೇಶಕ್ಕೆ ಪ್ರಯಾಣಿಸುವ ಮೊದಲು ಒಂದು ಪತ್ರಿಕಾ ಗೋಷ್ಠಿಯನ್ನು ನೆರವೇರಿಸಿ ಅದರಲ್ಲಿ ನಮ್ಮ ದೇಶದಲ್ಲಿ ಕಾರ್ಯವ್ಯವಸ್ಥೆಗಳಲ್ಲಿ ಸತ್ಯತೆಯನ್ನು ಕಾಣುವುದಿಲ್ಲವೆಂದರು. ಎಂಥ ಅವಮಾನ ನಮ್ಮ ದೇಶಕ್ಕೆ! ಪಾರದರ್ಶಕತೆಯಿಲ್ಲ. ಇದು ನಮ್ಮ ಬ್ರಾಹ್ಮಣರಲ್ಲಿಯೂ ಕೆಲವರಿಗೆ ಅನ್ವಯವಾಗಬಹುದು. ಇದು ದುಃಸ್ಥಿತಿ.

ಮಹಾಭಾರತದಲ್ಲಿ ಸಾತ್ತ್ವಿಕನಾದ ಬ್ರಾಹ್ಮಣನ ಗುಣಧರ್ಮಗಳನ್ನು ಬಹಳ ಸುಂದರವಾಗಿ ವಿವರವಾಗಿ ವಿವರಿಸಿದೆ. ಅವುಗಳನ್ನು ಬ್ರಾಹ್ಮಣನು ಅನುಸರಿಸಿದರೆ ಖಂಡಿತವಾಗಿ ಸಮಾಜವು ಆನಂದಮಯವಾಗಿರುತ್ತದೆ. ತಾನೂ ಕೂಡ ಪ್ರೇಮದಿಂದಿರುತ್ತಾನೆ. ತಾನು ಹಿರಿಯ ನಾಯಕನಂತೆ ವರ್ತಿಸುತ್ತಾ ಅವರಿಗೂ ಆ ಶ್ರೇಷ್ಠ ಧರ್ಮಗಳನ್ನು ಬೋಧಿಸುತ್ತಿದ್ದರೆ, ಆಗ ಆ ಸಮಾಜವು ಉತ್ತಮ ಜನಗಳಿಂದ ಕೂಡಿದ್ದಾಗಿ ವಾಸಿಸಲು ಯೋಗ್ಯವಾಗಿರಲು ಯಾವ ಅನುಮಾನವೂ ಇಲ್ಲ. ಆದ್ದರಿಂದ ಬ್ರಾಹ್ಮಣನ ಅಸ್ತಿತ್ವ ಸಮಾಜಕ್ಕೆ ಇರಬೇಕು. ॥ ಓಂ ತತ್ ಸತ್ ॥

# ಶ್ರೀ ಗೋಂದಾವಲಿ ಮಹಾರಾಜರ ನುಡಿಮುತ್ತುಗಳು

ಶ್ರೀ ಕೆ. ವಿ. ಬೆಲಸರೆಯವರ

**'ಮಹಾರಾಜರ ಚರಿತ್ರೆ ಮತ್ತು ವಾಙ್ಮಯ' ಪುಸ್ತಕದಿಂದ ಅನುವಾದ**

ಶ್ರೀದತ್ತಾವಧೂತ, ಚೈತನ್ಯಾಶ್ರಮ, ಹೆಬ್ಬಳ್ಳಿ

೧. ಜ್ಞಾನಮಾರ್ಗವೇ ಆಗಲಿ, ಭಕ್ತಿಮಾರ್ಗವೇ ಆಗಲಿ, ನಿಜವಾದ 'ನಾನು' ಯಾರು ಎಂಬುದನ್ನು ಅರಿತುಕೊಳ್ಳುವದಕ್ಕಾಗಿಯೇ ಎಲ್ಲ ಸಾಧನಗಳೂ ಇರುತ್ತವೆ. ಇಂದು ನಮ್ಮಲ್ಲಿ ಮಿಥ್ಯಾ 'ನಾನು'ವಿನ ಪ್ರಾಬಲ್ಯವಿರುತ್ತದೆ. ಅದು ಹೋಯಿತೆಂದರೆ ನಿಜವಾದ 'ನಾನು'ವನ್ನು ಹೊರಗೆಲ್ಲಿಂದಲೂ ತರಬೇಕಾದ ಆವಶ್ಯಕತೆ ಇರುವದಿಲ್ಲ. ಅದು ಪ್ರತಿಯೊಬ್ಬರ ಅಂತಃಕರಣದಲ್ಲಿ ಸ್ವತಃಸಿದ್ಧ ವಾಗೇ ಇರುತ್ತದೆ. ಆದ್ದರಿಂದ ಮಿಥ್ಯಾ 'ನಾನು'ವನ್ನು ಹೊಡೆದು ಹಾಕುವದಕ್ಕಾಗಿ ಭಗವಂತನ ದಾಸ್ಯತ್ವವನ್ನು ಸ್ವೀಕರಿಸುವದು ಅತ್ಯಂತ ಅವಶ್ಯವಾಗಿರುತ್ತದೆ. ಈಗ ನಮಗಿರುವ ಅವಸ್ಥೆಯಲ್ಲಿ, ನಾನು ಬ್ರಹ್ಮ ಇರುತ್ತೇನೆ ಎನ್ನುವದು ದೇಹಬುದ್ಧಿಯನ್ನು ಬೆಳೆಸುತ್ತದೆ.

೨. ವೇದಗಳಿಗೂ ಶಕ್ಯವಾಗದ್ದನ್ನು, ವೇದಗಳು ಯಾವುದರ ಬಗ್ಗೆ 'ನೇತಿ ನೇತಿ' ಎಂದು ಸುಮ್ಮನಾಗುತ್ತವೆಯೋ ಅಂಥ ಆ ಪರಮಾತ್ಮನ ಸ್ವರೂಪವನ್ನು ಸಂತರು ಅರಿತುಕೊಂಡು ಭಗವಂತನನ್ನು ಸಗುಣದಲ್ಲಿ ತಂದಿರುತ್ತಾರೆ.

೩. ನಿರ್ಗುಣದ ಹೊರತಾಗಿ ಸಗುಣ ಸತ್ಯವಲ್ಲವೆಂಬುದೇನೋ ನಿಜ. ಆದರೆ ಸಗುಣ ಸತ್ಯವೆಂದು ತಿಳಿದು ನಡೆಯದ ಹೊರತು ನಿರ್ಗುಣದವರೆಗೆ ತಲುಪಲಿಕ್ಕಾಗುವದಿಲ್ಲವೆಂಬುದೂ ಅಷ್ಟೇ ನಿಜ. ಸಗುಣದ ಭಕ್ತಿ ಮಾಡುತ್ತ ಹೋದರೆ "ನಾನು"ವಿನ ವಿಸ್ಮರಣೆ ಆಗುತ್ತ ಹೋಗುತ್ತದೆ. ಹಾಗೂ "ನಾನು" ಇಲ್ಲ, "ನೀನೇ" ಇರುತ್ತಿ ಎಂಬ ಭಾವನೆ ದೃಢವಾಗುತ್ತ ಹೋಗುತ್ತದೆ. ಕೊನೆಗೆ ಒಂದು ಕಡೆಗೆ 'ನಾನು' ಇಲ್ಲದಂತಾಗುತ್ತೇನೆ, ಇನ್ನೊಂದು ಕಡೆಗೆ ಭಗವಂತನೂ ಇಲ್ಲದಂತಾಗುತ್ತಾನೆ. ಪರಮಾತ್ಮನೊಬ್ಬನೇ ಶೇಷ ಉಳಿಯುತ್ತಾನೆ.

೪. ಉಪಾಸಕನಿಗೆ ದೇಹದ ವಿಸ್ಮರಣೆಯಾಯಿತೆಂದರೆ ಉಪಾಸ್ಯಮೂರ್ತಿಯಲ್ಲಿ ಜೀವಂತತನದ ಅನುಭವ ಬರತೊಡಗುತ್ತದೆ. ಅಲ್ಲದೆ ಸ್ವಲ್ಪ ತನ್ಮಯರಾದ ಉಳಿದ ಜನರಿಗೂ ಕೂಡ ಆ ಅನುಭವ ತಂದುಕೊಡಲು ಶಕ್ಯವಿರುತ್ತದೆ.

೫. ನಾವು ಅಟ್ಟದ ಮೆಟ್ಟಿಲು ಹತ್ತುವದು ಮೆಟ್ಟಲುಗಳಿಗಾಗಿ ಇರದೇ ಅಟ್ಟದ ಮೇಲೆ ಹೋಗುವದಕ್ಕಾಗಿ ಇರುತ್ತದೆ. ಅಟ್ಟದ ಮೇಲೆ ಹೋಗುವದು ಸಾಧ್ಯ ವಾಗಿದ್ದು ಮೆಟ್ಟಲು ಅದರ ಸಾಧನೆಯಾಗಿರುತ್ತದೆ. ಅದರಂತೆ ತೀರ್ಥಯಾತ್ರೆ, ವ್ರತ, ನೇಮ, ಧರ್ಮ ಮುಂತಾದವುಗಳು ಸಾಧನೆಯಾಗಿದ್ದು ಭಗವತ್

ಪ್ರಾಪ್ತಿಯು ನಮ್ಮ ಸಾಧ್ಯವಾಗಿರುತ್ತದೆ. ಭಗವಂತನ ಪ್ರಾಪ್ತಿಯು ಪಕ್ಕಕ್ಕೆ ಉಳಿದು, ನಾವು ಸಾಧನೆಗಳನ್ನೇ ಗಟ್ಟಿಯಾಗಿ ಹಿಡಿದುಕೊಂಡಿರುತ್ತೇವೆ.

೬. ಕರ್ಮಬಂಧನಗಳನ್ನು ಮುರಿಯಲು ಶಾಸ್ತ್ರದ ಬಂಧನಗಳನ್ನು ಪಾಲಿಸಬೇಕು.

೭. ಯಾರಲ್ಲಿ ಉಪಾಸನೆಯ ಬಲವಿರುತ್ತದೆಯೋ ಅವರೇ ಈ ಜಗತ್ತಿನಲ್ಲಿ ನಿಜವಾದ ಕಾರ್ಯ ಮಾಡುತ್ತಾರೆ.

೮. ಸಾಧಕನು ಬೆಣ್ಣೆಯಂತೆ ಮಧುರವಾಗಿರಬೇಕು. ಯಾರಿಗೂ ಯಾವುದೇ ರೀತಿಯಾಗಿ ನೋವನ್ನುಂಟುಮಾಡಬಾರದು. ನಾವು ಮತ್ತೊಬ್ಬರಿಗೆ ಬೇಕೆನಿಸಬೇಕು. ನಾವು ನಿಃಸ್ವಾರ್ಥಿಯಾದರೆ ಮಾತ್ರ ಇದು ಸಾಧಿಸುತ್ತದೆ. ನಮಗೆ ಯಾರೊಡನೆಯೂ ದ್ವೇಷವಿರಬಾರದು, ವೈರವಿರಬಾರದು. ಅದೇ ರೀತಿ ನಮಗೆ ನಮ್ಮನ್ನು ಮತ್ತೊಬ್ಬರು ದ್ವೇಷ ಮಾಡುತ್ತಾರೆ ಎಂಬ ಕಲ್ಪನೆಯು ಇರಬಾರದು. ನಮ್ಮ ಅಂತಃಕರಣದಲ್ಲಿ ಪ್ರೇಮವು ತುಂಬಿಕೊಂಡಿರಬೇಕು.

೯. ವಿದ್ವಾಂಸರು ವೇದಾಂತವನ್ನು ಅತ್ಯಂತ ಕಠಿಣಗೊಳಿಸುವದರಿಂದ ಸಾಮಾನ್ಯರಿಗೆ ಈ ವೇದಾಂತವು ನಮಗಾಗಿ ಅಲ್ಲ ಎನಿಸುತ್ತದೆ. ಆದರೆ ವೇದಾಂತವು ಎಲ್ಲರಿಗಾಗಿ, ಎಲ್ಲ ಮನುಷ್ಯಮಾತ್ರರಿಗಾಗಿ ಇರುತ್ತದೆ. ಮನುಷ್ಯನಿಗೆ ವೇದಾಂತದ ಹೊರತಾಗಿ ಬಾಳಲಿಕ್ಕೇ ಬರುವದಿಲ್ಲ. ನಮ್ಮ ಸಂಕುಚಿತ ಮನಸ್ಸನ್ನು ವಿಶಾಲಗೊಳಿಸುವದು, ಸ್ವಾರ್ಥಿಗಳಾದ ನಾವು ನಿಸ್ವಾರ್ಥಿಗಳಾಗುವದು ಇದೇ ವೇದಾಂತದ ನಿಜವಾದ ಮರ್ಮವಾಗಿರುತ್ತದೆ. ತತ್ತ್ವಜ್ಞಾನವು ಚಿರಂತನ ಹಾಗೂ ಎಂದೂ ಪರಿವರ್ತನೆ ಹೊಂದದಂತಹುದು. ಅದನ್ನು ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ಭಾಷೆಯಲ್ಲಿ ಹೇಳಬೇಕಾಗುತ್ತದಷ್ಟೆ. ಆದರೆ ಕೇವಲ ವಿಚಾರದಿಂದ ಅದು ನಿಶ್ಚಿತವಾಗುವದಿಲ್ಲ, ಅದಕ್ಕಾಗಿ ಸಾಧನೆ ಮಾಡಬೇಕಾಗುತ್ತದೆ. ವೇದಾಂತವು ನಿತ್ಯದ ಆಚರಣೆಯಲ್ಲಿ ಬರಬೇಕಾಗುತ್ತದೆ. ಎಲ್ಲ ಅನುಭವಗಳಲ್ಲಿ ಆತ್ಮಾನುಭವವು ಶ್ರೇಷ್ಠ.

೧೦. ಕಾಲವು ಮುಖ್ಯವಾಗಿ ಮೂರು ಪ್ರಕಾರದ್ದು. ನಿನ್ನೆಯದು, ಇಂದಿನದು ಹಾಗೂ ನಾಳಿನದು. ಕಳೆದುಹೋದ ಕಾಲವು ಏನು ಮಾಡಿದರೂ ತಿರುಗಿ ಬರುವದಿಲ್ಲ. ಆದ್ದರಿಂದ ಅದನ್ನು ಕುರಿತು ಚಿಂತೆ ಮಾಡಬಾರದು. ಹಿಂದೆ ಆದದ್ದನ್ನು ವಿವೇಕದಿಂದ ಮರೆಯಬಹುದು. ಮುಂದೆ ಏನು ಆಗುತ್ತದೆ ಎಂಬುದರ ಕಲ್ಪನೆಯಿಲ್ಲದ್ದರಿಂದ ಅದರ ಬಗ್ಗೆ ಚಿಂತೆ ಮಾಡಬಾರದು. ನಾವು ಇಂದು ನಮ್ಮ ಕರ್ತವ್ಯ ಮಾಡಿದ ಮೇಲೆ ಏನು ಆಗಬೇಕೋ ಅದು ಆಗಿಯೇ ಆಗುತ್ತದೆ. ಆದ್ದರಿಂದ ಶಾಂತವಾಗಿರಬೇಕು.

೧೧. ಮನುಷ್ಯನಿಗೆ ಜ್ಞಾನವಿರುವಷ್ಟನ್ನೂ ಬರೆಯುವದಕ್ಕಾಗುವದಿಲ್ಲ. ಓದುವವರಿಗೆ ಬರೆದಿರುವಷ್ಟು ತಿಳಿಯುವದಿಲ್ಲ. ಹಾಗೂ ತಿಳಿದಷ್ಟನ್ನೂ ಹೇಳಲಿಕ್ಕಾಗುವದಿಲ್ಲ,

ಹೇಳಿದಷ್ಟು ಕೇಳುವವರಿಗೆ ತಿಳಿಯುವದಿಲ್ಲ. ಆದ್ದರಿಂದ ಮೂಲವಸ್ತುವಿನ ವರ್ಣನೆಯನ್ನು ಸ್ವತಃ ಅನುಭವಿಸಿಯೇ ತಿಳಿದುಕೊಳ್ಳಬೇಕು.

೧೨. ನಾವು ಉಗಿಬಂಡಿಯಲ್ಲಿ ಕುಳಿತು ದಿಲ್ಲಿಗೆ ಹೊರಟಿರುತ್ತೇವೆ. ನಮ್ಮ ಗಾಡಿಯು ಪ್ರತಿಕ್ಷಣ ಮುಂದೆ ಹೋಗುತ್ತಿರುತ್ತದೆ. ಆದರೆ ನಾವು ಮಾತ್ರ ನಮ್ಮ ಸ್ಥಾನದಲ್ಲಿಯೇ ಕುಳಿತಿರುತ್ತೇವೆ ಹಾಗೂ ದಿಲ್ಲಿಗೆ ತಲುಪುತ್ತೇವೆ. ಅದರಂತೆ ಪರಿಸ್ಥಿತಿಯು ನಿರಂತರ ಪರಿವರ್ತನೆ ಹೊಂದುತ್ತದೆ. ಆದರೆ ನಾವು ಭಗವಂತನನ್ನು ಗಟ್ಟಿಯಾಗಿ ಹಿಡಿದುಕೊಂಡರೆ ನಿಶ್ಚಿತವಾಗಿ ಸಮಾಧಾನ ಹೊಂದುತ್ತೇವೆ. ಪರಿಸ್ಥಿತಿಯು ಯಾವುದೇ ರೀತಿ ಪರಿವರ್ತನೆ ಹೊಂದಿದರೂ ನಡೆಯುತ್ತದೆ.

೧೩. ಗಣಿಯಲ್ಲಿಯ ಕಲ್ಲುಗಳಲ್ಲಿ ಬಂಗಾರವಿರುವಂತೆ ನಮ್ಮಲ್ಲಿ ಭಗವಂತನಿರುತ್ತಾನೆ. ಕಲ್ಲುಗಳಲ್ಲಿಯ ಮಣ್ಣನ್ನು ಯಂತ್ರ/ಜರಡಿಗಳಿಂದ ದೂರಮಾಡಿದರೆ ಬಂಗಾರ ಪ್ರಾಪ್ತವಾಗುವಂತೆ, ಅನೇಕ ವಾಸನೆಗಳು ನಷ್ಟವಾದಾಗಲೇ ಭಗವಂತನ ಪ್ರಾಪ್ತಿ. ನಮ್ಮ ಅಹಂಭಾವ ಅಳಿದರೆ ಭಗವಂತನು ಪ್ರಕಟವಾಗುತ್ತಾನೆ.

೧೪. ನಾವು ನಿಷ್ಪಕ್ಷಪಾತ ಬುದ್ಧಿಯಿಂದ ವಿಚಾರ ಮಾಡಿದರೆ ನಮಗೆ ಭಗವಂತನ ಮಾರ್ಗ ಪ್ರಾಪ್ತಿಯಾಗುತ್ತದೆ. ಭಗವಂತನು ಸರ್ವರಿಗೂ ಸಾಧ್ಯವಾಗಿರುತ್ತಾನೆ. ಆದರೆ ಏನೂ ಮಾಡದಿರುವವರಿಗೆ ಅವನು ಸಾಧ್ಯವಿಲ್ಲ. ಮೊದಲು ನಮಗೆ ತಿಳಿದಷ್ಟನ್ನು ನಾವು ಮಾಡಬೇಕು. ಆಗ ಮುಂದಿನ ಸಾಧನೆಯು ತಾನಾಗೇ ತಿಳಿಯುತ್ತದೆ. ಇದ್ದದ್ದರಲ್ಲಿಯೇ ಸಮಾಧಾನವಿರಬೇಕು. ಸುಮ್ಮನೇ ಬಹಳ ಚಿಕಿತ್ಸೆ ಮಾಡುವದು ಅಹಂಕಾರದ, ದೇಹಬುದ್ಧಿಯ ಜ್ಞಾನವಾಗಿರುತ್ತದೆ.

೧೫. ಭಗವಂತನಿದ್ದಲ್ಲಿ ಮಾಯೆ, ದೇಹವಿದ್ದಲ್ಲಿ ಛಾಯೆ ಎಂಬಂತೆ ಅನುಭವವಿದ್ದಲ್ಲಿ ಭ್ರಮೆ ಇದ್ದೇ ಇರುತ್ತದೆ. 'ನಾನು ದೇಹವಿರುತ್ತೇನೆ' ಎಂಬ ಭಾವನೆ ಇರುವವರೆಗೆ ಅನುಭವದೊಂದಿಗೆ ಭ್ರಮೆ ಇದ್ದೇ ಇರುತ್ತದೆ. ವಸ್ತು ಕೇವಲ ಸುಖದ ಸಾಧನೆಯಾಗಿದ್ದು, ನಾವು ಅದನ್ನೇ ಭ್ರಮೆಯಿಂದ ಸುಖರೂಪವೆಂದು ತಿಳಿಯುತ್ತೇವೆ. ಅದರಿಂದ ವಸ್ತುವಿನ ಸಹಾಯದಿಂದ ಹೆಚ್ಚಿಗೆ ಸುಖ ಸಂಪಾದಿಸುವ ಬದಲು ನಾವು ವಸ್ತುವನ್ನೇ ಹೆಚ್ಚು ಹೆಚ್ಚಾಗಿ ಸಂಪಾದಿಸುವದರ ಬೆನ್ನು ಹತ್ತುತ್ತೇವೆ, ಹಾಗೂ ಕೊನೆಗೆ ದುಃಖ ಅನುಭವಿಸುತ್ತೇವೆ. ಸೃಷ್ಟಿಯು ಆನಂದಮಯ. ಆದರೆ ಭ್ರಮೆಯಿಂದ ಅದು ನಮಗೆ ಹಾಗೆ ಕಾಣುವದಿಲ್ಲ. ಈ ಭ್ರಮೆಯ ಮೂಲವು ನಮ್ಮ ಅಂತರಂಗದಲ್ಲಿರುತ್ತದೆ.

೧೬. ಭಗವಂತನು ಸೂರ್ಯನ ಪ್ರಕಾಶದಂತೆ ಇರುತ್ತಾನೆ. ಅವನು ಒಂದು ಕಡೆಗೆ ಇದ್ದು ಎಲ್ಲ ಕಡೆಗೆ ಸತ್ತಾರೂಪದಿಂದ ವ್ಯಾಪಿಸಿಕೊಂಡಿರುತ್ತಾನೆ.

೧೭. ಭಗವಂತನು ಪ್ರತ್ಯಕ್ಷ ಕಲ್ಪವೃಕ್ಷವಾಗಿರುತ್ತಾನೆ. ನಾವು ಯಾವಾಗಲೂ ಚಿಂತೆಯುಳ್ಳವರಿರುತ್ತೇವೆ. ಆದ್ದರಿಂದ ಅವನು ಚಿಂತೆಯನ್ನೇ ಕೊಡುತ್ತಾನೆ. ನಾವು ಅವನ ಹತ್ತಿರ ಆನಂದ ಕೇಳಿದರೆ ಅವನು ನಮಗೆ ಆನಂದವನ್ನೇ ಕೊಡುತ್ತಾನೆ.

# ವೇದಾಂತಜ್ಞಾನಕ್ಕೆ ಮಹಿಳೆಯೂ ಅಧಿಕಾರಿ

**ಸಚ್ಚಿದಾನಂದ ನಾರಾಯಣಶಾಸ್ತ್ರೀ ಕಾಶೀಕರ**

೨೨, 'ಗುರುಕೃಪಾ' ೫ನೇ ಅಡ್ಡರಸ್ತೆ, ಶ್ರೀನಗರ, ಉಣಕಲ್, ಹುಬ್ಬಳ್ಳಿ-೫೮೦೦೩೧

ದೂರವಾಣಿ: ೨೩೭೦೪೩೯೩

'ಮಾತೃದೇವೋ ಭವ' ಇದು ಶ್ರುತಿವಾಕ್ಯ. 'ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ' ಇದು ಸ್ಮೃತಿವಾಕ್ಯ. ಇದಲ್ಲದೇ ಅಸಂಖ್ಯ ಪುರಾಣಗಳು, ಸಾಹಿತ್ಯಗಳು, ಎಲ್ಲ ಧರ್ಮಗಳಲ್ಲಿ ಮಾತೃ-ಸ್ತ್ರೀ ಪ್ರಶಂಸೆಗಳಿಗೆ ಬರವಿಲ್ಲ. ಆದರೂ ಧಾರ್ಮಿಕ ಆಧ್ಯಾತ್ಮಿಕ ಕ್ಷೇತ್ರಗಳಲ್ಲಿ ಮಹಿಳೆಯರಿಗೆ ತಕ್ಕ ಸ್ಥಾನಮಾನ ಇಲ್ಲ. ಇದು ಸದ್ಯದ ಜಾಗತಿಕ ಸ್ಥಿತಿ. ನಮ್ಮ ಸನಾತನ ಧರ್ಮವೂ ಇದಕ್ಕೆ ಹೊರತಾಗಿಲ್ಲ ಎಂಬ ಆರೋಪ ಸಂಪೂರ್ಣ ಸತ್ಯವಲ್ಲ. ಋಗ್ವೇದ ಯುಗೀನ ಕಾಲದಲ್ಲಿ ಮಹಿಳೆಯರಿಗೆ ತುಂಬ ಗೌರವ. ಪುರುಷರಿಗೆ ಸಮಾನ ಸ್ಥಾನಮಾನ, ಗಂಡುಮಕ್ಕಳಂತೆಯೇ ಶಿಕ್ಷಣ. ಯಜ್ಞಯಾಗಾದಿ, ಧಾರ್ಮಿಕ ಅನುಷ್ಠಾನಗಳು ಪತ್ನಿಯಿಲ್ಲದೇ ಪೂರ್ಣವಲ್ಲ. ನಾರಿಯಿಲ್ಲದೇ ಪುರುಷ ಅಪೂರ್ಣ. ಅಂತಲೇ ಪತ್ನಿ ಅರ್ಧಾಂಗಿ. ಆಗಿನ ಕಾಲದ ಕುಟೀರ ವಾಸ, ಋಷಿಸದೃಶ ಜೀವನ, ವೇದಾಧ್ಯಯನ-ಅಧ್ಯಾಪನ, ಪವಿತ್ರ ಶಾಂತ ವಾತಾವರಣದಲ್ಲಿ ಜನ ಜೀವನ ನಡೆಯುತ್ತಿತ್ತು, ಕಾಡಿನಲ್ಲಿ ಯಥೇಚ್ಛವಾಗಿ ಕಂದ-ಮೂಲ, ಫಲಗಳು ದೊರಕುತ್ತಿದ್ದವು. ವಿಶ್ವವಾರಾ, ಸೂರ್ಯಾ, ಗಾರ್ಗೀ, ಮೈತ್ರೇಯಿ, ದೇವಹೂತಿಯಂತಹ ಮುಕ್ತಿಮಾರ್ಗದಲ್ಲಿ ಸಾಗಬಯಸುವ ಸ್ತ್ರೀಯರಿಗೆ ಪೂರಕವಾದ ಕಾಲ. ಅಂತಲೇ ಅವರು ವೇದದ ಕೆಲ ಸಂಹಿತೆಗಳ ದ್ರಷ್ಟಾರರಾದರು. ಇಷ್ಟು ದೊಡ್ಡ ಮರ್ಯಾದೆ ಬೇರೆ ಧರ್ಮಗಳಲ್ಲಿ ಸ್ತ್ರೀಯರಿಗೆ ಕೊಟ್ಟಿರುವುದು ಕಂಡುಬರುವುದಿಲ್ಲ. ಶ್ರುತಿಯಲ್ಲಿ ಸಹ ಸ್ತ್ರೀ-ಪುರುಷ ಭೇದದ ದೃಷ್ಟಾಂತ ಸಿಗುವುದಿಲ್ಲ, ಬದಲಾಗಿ ಸ್ತ್ರೀ ಪ್ರಶಂಸೆಯೇ ಅಲ್ಲಿದೆ. ಸ್ಮೃತಿಗಳಲ್ಲಿ ಮಾತ್ರ ಸ್ತ್ರೀ ಕಟ್ಟುಪಾಡಿನ ಕೆಲ ಉದಾಹರಣೆಗಳುಂಟು. ಬಹುಶಃ ಸ್ಮೃತಿಕಾರರು ಆಗಿನ ಪರಿಸ್ಥಿತಿಗೆ ಅನುಗುಣವಾಗಿ ಅಂಥ ನಿಯಮಗಳನ್ನು ಮಾಡಿರಬಹುದು. ಅದಷ್ಟರಿಂದಲೇ ಸ್ಮೃತಿಗಳು, ಸ್ತ್ರೀ ಸ್ವಾತಂತ್ರ್ಯ ಹರಣ ಮಾಡಿವೆ ಎಂಬ ಆರೋಪ ಸಿದ್ಧವಾಗುವುದಿಲ್ಲ.

ಬಹುಶಃ ಕಾಲಾಂತರದಲ್ಲಿ ಮಾನವ ಕೃಷಿಮಾಡಿ, ಆಹಾರ ಬೆಳೆದು, ಜೀವನ ಮಾಪನ ಮಾಡಬೇಕಾಗಿ ಬಂದಾಗ ಮತ್ತು ಕೃಷಿ ಅಥವಾ ಇನ್ನಿತರ ಉದ್ಯೋಗಗಳಿಗೆ ಪುರುಷರು ಹೊರಹೋಗುವಾಗ, ಮನೆಯ ಬಹು ಮುಖ್ಯ ಜವಾಬ್ದಾರಿಯನ್ನು ಮಹಿಳೆಯರಿಗೆ ವಹಿಸಿರಬಹುದು. ಗೃಹಿಣಿಯಿಂದಾಗಿಯೇ ಮನೆ 'ಮನೆ' ಎನಿಸಿಕೊಳ್ಳುತ್ತದೆ (ಗೃಹಿಣೀ ಗೃಹಮುಚ್ಯತೇ). ಆಚಾರ್ಯ ಶಂಕರರು 'ಪಂಡಿತಾ' ಎಂಬ ವೇದ ಶಬ್ದಕ್ಕೆ 'ಗೃಹಕಾರ್ಯ ಕುಶಲಾ' ಎಂಬ ಅರ್ಥ ನೀಡಿದ್ದಾರೆ; ಅಂದರೆ ಪಾಲಿಗೆ ಬಂದ ಕೆಲಸವನ್ನು ಶ್ರದ್ಧೆ ನಿಷ್ಠೆಯಿಂದ ಮಾಡುವವಳು, ಮನೆಯೇ ಮೊದಲ

ಪಾಠಶಾಲೆ, ತಾಯಿಯೇ ಮೊದಲ ಗುರು, ಅಂತೆಯೇ ಮಕ್ಕಳಿಗೆ ಸಂಸ್ಕಾರವೆಂಬ ಮಹಾನ್ ಮೂಲಶಿಕ್ಷಣದ ಮೂಲಕ ಸುಸ್ವಭಾವಿ, ಸುಸಂಸ್ಕೃತರನ್ನಾಗಿ ಮಾಡುವ ಜವಾಬ್ದಾರಿ. ಎಲ್ಲ ಮಹಾತ್ಮರ ಜೀವನದಿಂದ ಅವರಲ್ಲಿ ಮಹಾತ್ಮರಾಗಲು ಬೇಕಾದಂತಹ ಉತ್ತಮೋತ್ತಮ ಗುಣಗಳು ಅವರ ತಾಯಿಯಿಂದಲೇ ಬಂದವು ಎಂಬುದು ತಿಳಿಯುತ್ತದೆ. ಮನೆ-ಮನ ತುಂಬುವ ಮಹಿಳೆಯರ ಇಂಥ ಸಹಕಾರದಿಂದಲೇ ಪುರುಷರು ತಮ್ಮ ತಮ್ಮ ಕ್ಷೇತ್ರದಲ್ಲಿ ಸಾಧನೆ ಮಾಡಲು ಸಾಧ್ಯವಾಯಿತು. ಮೊದಲು ಸ್ತ್ರೀ ಗೃಹಕಾರ್ಯ ಮುಗಿಸಿ, ಅನಂತರ ವೇದಾದಿ ಅಧ್ಯಯನ ಮಾಡುತ್ತಿದ್ದಳು. ಕ್ರಮೇಣ ಮನೆ-ಮಕ್ಕಳು, ಅಡುಗೆ, ಅತಿಥಿ ಸತ್ಕಾರ ಹೀಗೆ ಗೃಹ ಔನ್ನತ್ಯದಲ್ಲೇ ಧನ್ಯತೆ ಪಟ್ಟುಕೊಂಡ ಮಹಿಳೆಗೆ ವೇದ-ವೇದಾಂತಕ್ಕೆಲ್ಲಿ ಸಮಯ? ಈಗಂತೂ ಕಾಲ ಮಹಿಮೆಯಿಂದ, ಮನೆಯೊಂದಿಗೆ ಆರ್ಥಿಕ ಸಂಪಾದನೆಯ ಜವಾಬ್ದಾರಿಯೂ ಬಂದು, ವೇದಾಂತವೆನ್ನುವುದು ಬರೀ ಮರೀಚಿಕೆಯಾಗಿದೆ.

ಧಾರ್ಮಿಕ ಯಜ್ಞಯಾಗಾದಿ ವಿಧಿ-ವಿಧಾನಗಳಲ್ಲಿ ಪತಿ-ಪತ್ನಿಯರಿಗೆ ಸಮಾನ ಸ್ಥಾನವಿದ್ದರೂ, ಗರ್ಭಿಣಿ, ರಜಸ್ವಲಾದಿ ಶಾರೀರಿಕ ಅನನುಕೂಲತೆಗಳ ಕಾರಣದಿಂದ ಮಹಿಳೆಯರಿಗೆ ವೇದಾಧ್ಯಯನ ನಿರಾಕರಿಸಬಹುದು. ಇದು ವೇದ ಕರ್ಮಪ್ರಧಾನ, ಅನುಷ್ಠಾನ ಶಾಸ್ತ್ರವಾದ್ದರಿಂದ ಸ್ವಲ್ಪ ಮಟ್ಟಿಗೆ ಸಮರ್ಥನೀಯವೂ ಅಹುದು.

ಆದರೆ ವೇದಾಂತಶಾಸ್ತ್ರ ಜ್ಞಾನ ಪ್ರಧಾನ, ಸ್ವಾನುಭವ ಶಾಸ್ತ್ರ. ಅಲ್ಲಿ ನಿರೂಪಿತ ಆತ್ಮ ನಮ್ಮೆಲ್ಲರ ಸ್ವಸ್ವರೂಪವೇ. ಈ ಆತ್ಮತತ್ತ್ವಕ್ಕಾದರೋ, ಜಾತಿ, ಧರ್ಮ, ಲಿಂಗ, ದೇಶ, ಕಾಲಗಳೆಂಬ ಭೇದವಿಲ್ಲ. ಆದ್ದರಿಂದ ಮಹಿಳೆಯರಿಗೆ ಕೂಡ ತಮ್ಮ ಸ್ವಸ್ವರೂಪ ಚಿಂತನೆ, ವೇದಾಂತ ಅಧ್ಯಯನ ತನ್ಮೂಲಕ ಆತ್ಮೋದ್ಧಾರ ಮಾಡಿಕೊಳ್ಳುವ ಅಧಿಕಾರ ಖಂಡಿತವಾಗಿ ಉಂಟು. ಆದರೆ ಮಹಿಳೆಯರು ವೇದಾಂತವನ್ನರಿಯುವುದು ವಯಕ್ತಿಕ ನೆಲೆಯಿಂದಷ್ಟೇ ಅಲ್ಲ, ರಾಷ್ಟ್ರೀಯ ದೃಷ್ಟಿಯಿಂದ ಸಹ ಅತ್ಯವಶ್ಯಕವಾಗಿದೆ. ಏಕೆಂದರೆ ಇಂದು ದೇಶದ ತುಂಬೆಲ್ಲ ತಾಂಡವವಾಡುತ್ತಿರುವ ಅನೀತಿ, ವಿವಾಹ ವಿಚ್ಛೇದನ, ವ್ಯಭಿಚಾರ, ಸ್ವಾರ್ಥ, ಭ್ರಷ್ಟಾಚಾರ, ಕ್ರೌರ್ಯ, ಪಾಶ್ಚಾತ್ಯ ಅಂಧಾನುಕರಣೆ, ಲೋಭಗಳಿಂದಾಗಿ ವ್ಯಕ್ತಿ, ಕುಟುಂಬ, ಸಮಾಜ, ಸಂಸ್ಕೃತಿ, ರಾಷ್ಟ್ರಗಳು ಅವನತಿಯತ್ತ ಸಾಗಿವೆ. ಈ ಹಂತದಲ್ಲಿ ಮೊತ್ತಮೊದಲ ಘಟಕವಾದ ವ್ಯಕ್ತಿಯನ್ನು ತಿದ್ದಿ, ಯೋಗ್ಯ ನಾಗರಿಕನನ್ನಾಗಿ ಮಾಡುವ, ಅವನ ಅಂತಃಶಕ್ತಿಯನ್ನು ಜಾಗೃತಗೊಳಿಸುವ ಕೆಲಸವನ್ನು ಮಾತೆಯಲ್ಲದೇ ಇನ್ನಾರು ಮಾಡಲು ಸಾಧ್ಯ? ಆದರೆ ಮಹಿಳೆ ವೇದಾಂತದ ರಹಸ್ಯ ಅರಿತರೆ ಮಾತ್ರ ಅವಳಿಗೆ ಇಂತಹ ಶಕ್ತಿ, ಸ್ಫೂರ್ತಿ, ಸಾಮರ್ಥ್ಯ ಬರಲು ಸಾಧ್ಯ. ಈ ದೃಷ್ಟಿಯಿಂದ ಮಹಿಳೆ ವೇದಾಂತ ಅರಿಯುವುದು ಅನಿವಾರ್ಯವೇ ಆಗಿದೆ. ಇಹ, ಪರ ಎರಡಕ್ಕೂ ವೇದಾಂತ ತಾರಕ. ಆಧುನಿಕ ವಿದ್ಯೆಯಿಂದ ಉದರಂಭರಣ ಆದೀತು. ಆದರೆ ನೈತಿಕನಿಷ್ಠೆ, ಶಾಂತಿ-ಸಮಾಧಾನ, ಸಂಸ್ಕಾರದೀಕ್ಷೆ, ಚಾರಿತ್ರ್ಯ, ಮಕ್ಕಳನ್ನು ನಾಗರಿಕರನ್ನಾಗಿ ರೂಪಿಸುವ ಶಕ್ತಿ ವೇದಾಂತದಿಂದಲೇ ಲಭ್ಯ. ॥ ಓಂ ತತ್ಸತ್ ॥

# ನಿಜವಾದ ಪೂಜೆ

## ಶ್ರೀ ವಿವೇಕಾನಂದ ಸ್ವಾಮಿಗಳು ರಾಮೇಶ್ವರದಲ್ಲಿ ಮಾಡಿದ ಉಪನ್ಯಾಸ

ಪ್ರೇಮದಲ್ಲಿ ಧರ್ಮವಿರುವುದೇ ಹೊರತು ಬರಿಯ ಕರ್ಮದಲ್ಲಿರುವದಿಲ್ಲ. ನಮ್ಮ ಹೃದಯದಲ್ಲಿ ನಿಷ್ಕಪಟವಾದ ಪ್ರೇಮವಿರಬೇಕು. (ಅದೇ ಧರ್ಮವು) ಶರೀರ ಶುದ್ಧಿ-ಮನಃಶುದ್ಧಿ ಇಲ್ಲದವನು ಶಿವಾಲಯಕ್ಕೆ ಬರುವದೂ ಶಿವಾರ್ಚನೆಯನ್ನು ಮಾಡುವದೂ ನಿಷ್ಪ್ರಯೋಜನ. ಮನಸ್ಸಿನಲ್ಲಿಯೂ ದೇಹದಲ್ಲಿಯೂ ಪರಿಶುದ್ಧ ವಾಗಿರುವ ಪ್ರಾರ್ಥನೆಗೇ ಶಿವನು ಕಿವಿಗೊಡುವನು. ಮನಃಶುದ್ಧಿಯಿಲ್ಲದೆ ಇತರರಿಗೆ ಧರ್ಮೋಪದೇಶ ಮಾಡುವ ಪ್ರಯತ್ನವು ವ್ಯರ್ಥವೇ. ಬಾಹ್ಯಾರ್ಚನೆಯು ಅಂತರರ್ಚನೆಗೆ ಚಿಹ್ನೆಯೇ; ಮಾನಸ ಪೂಜೆಯೂ ಮನಃಶುದ್ಧಿಯೂ ತಾತ್ತ್ವಿಕ ವಾದವುಗಳು.

ಈ ಕಲಿಯುಗದಲ್ಲಿ ಜನರು ಎಂಥ ಹೀನಸ್ಥಿತಿಗೆ ಇಳಿದಿರುವರೆಂದರೆ, ತಾವು ಏನು ಬೇಕಾದರೂ ಮಾಡುತ್ತಿರಲಿ, ಯಾವದಾದರೊಂದು ಕ್ಷೇತ್ರಕ್ಕೆ ಹೋದರೆ ಸಾಕು, ತಮ್ಮ ಪಾಪಗಳೆಲ್ಲ ಪರಿಹಾರವಾಗಿ ಬಿಡುವದೆಂದು ಯೋಚಿಸುವರು. ಒಬ್ಬನು ಕೆಟ್ಟ ಮನಸ್ಸಿನಿಂದ ದೇವಸ್ಥಾನವನ್ನು ಪ್ರವೇಶಿಸಿದರೆ ತನ್ನಲ್ಲಿದ್ದ ಪಾಪಗಳ ಜೊತೆಗೆ ಇನ್ನೂ ಕೆಲವನ್ನು ಸೇರಿಸಿಕೊಂಡು ತಾನು ಮನೆಯಿಂದ ಹೊರಟಾಗ್ಗೆ ಇದ್ದದ್ದಕ್ಕಿಂತ ಕೆಟ್ಟ ಸ್ಥಿತಿಯಲ್ಲಿಯೇ ಹಿಂತಿರುಗುವನೆಂಬುದರಲ್ಲಿ ಸಂಶಯವಿಲ್ಲ. ತೀರ್ಥವೆಂದರೆ ಪವಿತ್ರವಸ್ತುಗಳೂ ಪವಿತ್ರ ಜನರೂ ತುಂಬಿರುವ ಸ್ಥಳವೆಂದರ್ಥ. ಪವಿತ್ರವಾದ ಜನಗಳು ಇದ್ದು ದೇವಾಲಯವು ಯಾವದೂ ಇಲ್ಲದಿದ್ದರೂ ಆ ಸ್ಥಳವನ್ನು ತೀರ್ಥವೆಂದೇ ಭಾವಿಸಬೇಕು. ನೂರಾರು ದೇವಾಲಯಗಳಿದ್ದರೂ ಅಪವಿತ್ರವಾದ ಜನರೇ ವಾಸಮಾಡುತ್ತಿರುವಲ್ಲಿ ತೀರ್ಥವು ಮಾಯವಾಗುವದು. ತೀರ್ಥದಲ್ಲಿ ವಾಸಮಾಡುವದು ಮಹಾಕಷ್ಟಕರವಾದದ್ದು. ಏಕೆಂದರೆ ಸಾಮಾನ್ಯ ಸ್ಥಳಗಳಲ್ಲಿ ಮಾಡಿದ ಪಾಪವನ್ನು ಹೇಗಾದರೂ ಪರಿಹಾರ ಮಾಡಿಕೊಳ್ಳಬಹುದು. ತೀರ್ಥದಲ್ಲಿ ಮಾಡಿದ ಪಾಪವನ್ನು ಪರಿಹಾರಮಾಡಿಕೊಳ್ಳುವುದಕ್ಕೆ ಆಗುವುದೇ ಇಲ್ಲ.

ಪೂಜೆಯೊಳಗೆಲ್ಲ ಇದೇ ಸಾರವು, ಪರಿಶುದ್ಧರಾಗಿರಬೇಕು, ಪರೋಪಕಾರರತ ರಾಗಿರಬೇಕು. ಬಡವರಲ್ಲಿಯೂ ದುರ್ಬಲರಲ್ಲಿಯೂ ರೋಗಿಗಳಲ್ಲೂ ಶಿವನನ್ನು ಕಾಣುವಾತನೇ ನಿಜವಾಗಿ ಶಿವಾರ್ಚನೆ ಮಾಡುವಾತನು. ಲಿಂಗದಲ್ಲಿ ಮಾತ್ರವೇ ಶಿವನನ್ನು ಕಂಡರೆ, ಅಂಥವನ ಪೂಜೆಯು ಇನ್ನೂ ಪ್ರಾರಂಭಸ್ಥಿತಿಯಲ್ಲಿದೆಯೆಂದು ಭಾವಿಸಬೇಕು. ದೇವಾಲಯಗಳಲ್ಲಿ ಮಾತ್ರವೇ ಶಿವನನ್ನು ಕಾಣುವವನ ವಿಷಯದಲ್ಲಿ ಪ್ರಸನ್ನನಾಗುವುದಕ್ಕಿಂತಲೂ ಒಬ್ಬನೇ ಒಬ್ಬ ಬಡವನಿಗೆ ಜಾತಿ, ಮತ, ಕುಲ ಮುಂತಾದವುಗಳನ್ನು ವಿಚಾರಿಸದೆ ಶಿವಬುದ್ಧಿಯಿಂದ ಸಹಾಯಮಾಡುವಾತನ ವಿಷಯದಲ್ಲಿಯೇ ಪರಮಶಿವನು ಬೇಗನೆ ಪ್ರಸನ್ನನಾಗುವನು.

ಶಿವನೇ ಯಜಮಾನನು. ಈ ಪ್ರಪಂಚವೇ ಆತನ ಉದ್ಯಾನವು. ಇಲ್ಲಿ ಎರಡು ಬಗೆಯ ತೋಟಗಾರರಿರುವರು. ಸೋಮಾರಿಗಳಾಗಿಯೂ ಕಪಟಿಗಳಾಗಿಯೂ ಇದ್ದು ಶಿವನ ಸುಂದರವಾದ ಕಣ್ಣು ಮೂಗುಗಳನ್ನೂ ಮಿಕ್ಕ ಅವಯವಗಳನ್ನೂ ಬಣ್ಣಿಸುತ್ತಾ ಇರುವವರು ಒಂದು ಪಂಗಡ. ಶಿವನ ಮಕ್ಕಳಾಗಿರುವ ಬಡವರನ್ನೂ ಬಲಹೀನರನ್ನೂ ಮೂಗು ಜಂತುಗಳನ್ನೂ ಮಿಕ್ಕ ಆತನ ಸೃಷ್ಟಿಯನ್ನೂ ಪ್ರೀತಿಯಿಂದ ನೋಡಿಕೊಳ್ಳು ತ್ತಿರುವವರು ಮತ್ತೊಂದು ಪಂಗಡ. ಇಬ್ಬರಲ್ಲಿ ಶಿವನಿಗೆ ಯಾರು ಮೆಚ್ಚಿನವರು? ಆತನ ಮಕ್ಕಳ ಸೇವೆಯನ್ನು ಯಾರು ಮಾಡುವರೋ ಅವರಲ್ಲಿಯೇ ಶಿವನ ಮೆಚ್ಚಿಗೆ ಯೆಂಬುದರಲ್ಲಿ ಸಂದೇಹವಿಲ್ಲ.

ತಂದೆಯ ಸೇವೆಯನ್ನು ಮಾಡಬೇಕೆಂಬವನು ಮೊದಲು ಆತನ ಮಕ್ಕಳ ಸೇವೆಯನ್ನು ಮಾಡಬೇಕು. ಈ ಪ್ರಪಂಚದಲ್ಲಿರುವ ಸಕಲ ಪ್ರಾಣಿಗಳ ಸೇವೆಯನ್ನೂ ಮೊಟ್ಟಮೊದಲು ಮಾಡಬೇಕು. ಈಶ್ವರನ ಸೇವಕರನ್ನು ಯಾರು ಸೇವಿಸುವರೋ ಅವರೇ ಪರಮೇಶ್ವರನಿಗೆ ಪರಮಸೇವಕರೆಂದು ಶಾಸ್ತ್ರಗಳಲ್ಲಿ ಹೇಳಿರುತ್ತದೆ. ಆದ್ದರಿಂದ ಇದನ್ನು ನೆನಪಿನಲ್ಲಿಟ್ಟು ಪರಿಶುದ್ಧರಾಗಿರಬೇಕು, ಹತ್ತಿರಕ್ಕೆ ಯಾರು ಬಂದರೂ ಸರಿಯೆ, ಕೈಯಲ್ಲಾದ ಸಹಾಯವನ್ನು ಮಾಡುವದೇ ಪುಣ್ಯ ಕರ್ಮವು. ಇದರ ಶಕ್ತಿಯಿಂದ ಚಿತ್ತಶುದ್ಧಿಯಾಗುವುದು. ಆಗ ಎಲ್ಲರ ಹೃದಯದಲ್ಲಿಯೂ ಇರುವ ಶಿವನು ಅಭಿವ್ಯಕ್ತನಾಗುವನು. ನಿಜವಾಗಿಯೂ ಅವನು ಪ್ರತಿಯೊಬ್ಬನ ಹೃದಯ ದಲ್ಲೂ ಯಾವಾಗಲೂ ಇರುವನು. ಕನ್ನಡಿಯ ಮೇಲೆ ಕೊಳೆ ಧೂಳು ಇದ್ದಾಗ ನಮ್ಮ ಮುಖವು ಕಾಣದಂತೆ, ನಮ್ಮ ಹೃದಯಕನ್ನಡಿಯ ಮೇಲೂ ಅಜ್ಞಾನ ದುಷ್ಟತನ ಗಳೆಂಬ ಕೊಳೆ ಧೂಳಿನಿಂದ ಆತನನ್ನು ನಾವು ಕಾಣೆವು. ಸ್ವಾರ್ಥಬುದ್ಧಿಯೇ, ಎಲ್ಲರಿಗಿಂತ ಮೊದಲು ತನ್ನ ವಿಚಾರವನ್ನು ನೋಡಿಕೊಳ್ಳುವದೇ ಮುಖ್ಯವಾದ ಪಾಪವು. 'ಸ್ವರ್ಗವೇನೂ ನನಗೆ ಬೇಡ, ನಾನು ನರಕಕ್ಕೆ ಹೋಗುವದರಿಂದ ಜನಗಳಿಗೆ ಉಪಕಾರವಾಗುವದಾದರೆ ಅವಶ್ಯವಾಗಿ ಅಲ್ಲಿಗೇ ಹೋಗುವೆನು' ಎಂದು ಯೋಚಿಸುವವನೇ ಅಸ್ವಾರ್ಥಪರನು. ಧರ್ಮಕ್ಕೆ ಈ ಅಸ್ವಾರ್ಥಪರತೆಯೇ ಒರೆಗಲ್ಲು. ಸ್ವಾರ್ಥಿಯು ಸಕಲ ದೇವಾಲಯಗಳನ್ನು ಪ್ರವೇಶಿಸಿದರೂ, ಸಕಲ ಕ್ಷೇತ್ರಗಳನ್ನು ದರ್ಶನ ಮಾಡಿರಬಹುದಾದರೂ ಚಿರತೆಯಂತೆ ಮೈಗೆಲ್ಲ ಪುಂಡ್ರಾದಿ ಗಳನ್ನು ಹಾಕಿಕೊಂಡಿದ್ದರೂ ಅವನು ಖಂಡಿತವಾಗಿಯೂ ಶಿವನಿಗೆ ಅತ್ಯಂತ ದೂರದಲ್ಲಿರುವನು.

> ವಿಷಯಸುಖವನ್ನು ತ್ಯಾಗಮಾಡಿ ಯೋಗಸಾಧನೆಯಿಂದ ಆತ್ಮದರ್ಶನ ಪಡೆದವನೇ ಜ್ಞಾನಿಯು. ಆತ್ಮವಿಚಾರವನ್ನು ಶ್ರವಣ ಮಾಡಿದ ಮಾತ್ರದಿಂದ ಆನಂದಾನುಭವವಾಗುವುದಿಲ್ಲ. ನಿಜವಾದ ಆನಂದವು ಸಾಧನೆಯಿಂದಲೇ ಅನುಭವಕ್ಕೆ ಬರುತ್ತದೆ. ಆನಂದಾನು ಭವ ಪಡೆದವನೇ ಮಹಾತ್ಮನು. —ಶ್ರೀ ನಿತ್ಯಾನಂದರು

# ಸದ್ಗುರುವಿನ ಮಹತ್ತ್ವ

ಹೊಸಕೆರೆ ಚಿದಂಬರಯ್ಯ

ಸಾಮಾನ್ಯವಾಗಿ ನಮಗೆ ತಿಳಿಯದ ವಿಷಯಗಳನ್ನು ತಿಳಿಸಿಕೊಡುವವರನ್ನು ಗುರುಗಳೆನ್ನುತ್ತಾರೆ. ಗುರುವೆಂಬ ಶಬ್ದಕ್ಕೆ ಭಾರವೆಂದರ್ಥ. ಅಂತರ್ದೃಷ್ಟಿಯ ನಮ್ಮ ಪೂರ್ವಿಕರು ಮನಸ್ಸಿನಲ್ಲಿರುವ ತಿಳಿವಳಿಕೆಯ ತೂಕಕ್ಕೆ ಬೆಲೆಕೊಟ್ಟು ಗುರುಗಳೆಂದಿರುತ್ತಾರೆ. ಧರ್ಮಕ್ಕೆ ಸಾಧನವಾಗಬೇಕಾದರೆ ದೇಹವು ಅರೋಗದೃಢಕಾಯವಾಗಬೇಕು. ಸಾಮಾನ್ಯವಾಗಿ ಯೋಗಿಗಳು ಯಾವಾಗಲೂ ಆರೋಗ್ಯದಿಂದ ಇರುವದಕ್ಕೆ ಅವರ ಮನಸ್ಸಿನ ಸುಶಿಕ್ಷಿತತ್ತ್ವವೇ ಕಾರಣ. ಹೀಗೆ ಮನಸ್ಸಿನ ಉತ್ತಮ ಸ್ಥಿತಿಯಲ್ಲಿರುವವನು ತಾನು ತನ್ನ ಆನಂದವನ್ನನುಭವಿಸುವದಲ್ಲದೆ ತನ್ನ ಪ್ರಭಾವದಿಂದ ಇತರರನ್ನು ಕೂಡ ಆನಂದಗೊಳಿಸುವದರಿಂದ ಗುರುವೆಂಬ ಶಬ್ದವು ಅಂತಹವನಿಗೆ ಚೆನ್ನಾಗಿ ಒಪ್ಪುತ್ತದೆ.

ವ್ಯವಹಾರದ ಸರ್ವಸಾಮಾನ್ಯ ವಿಷಯಗಳಲ್ಲಿ ಒಬ್ಬನಿಗಿಂತ ಇನ್ನೊಬ್ಬನಿಗೆ ಏನಾದರೊಂದು ತಿಳಿವಳಿಕೆಯು ಹೆಚ್ಚಾಗಿದ್ದೇ ಇರುವದರಿಂದ ಪ್ರತಿಯೊಬ್ಬನೂ ಗುರುವೆನಿಸಿಕೊಂಡು ಲೋಕವೆಲ್ಲಾ ಗುರುಮಯವಾಗಿ ಬಿಡುವದು, ಆಗ ಗುರುಶಬ್ದದ ವೈಶಿಷ್ಟ್ಯವೇ ಉಳಿಯುವದಿಲ್ಲ. ಆದರೆ ಒಳ್ಳೆ ಪ್ರತಿಭಾಶಾಲಿಗಳಾದವರು ಒಂದೊಂದು ವಿಚಾರದ ಸಣ್ಣ ಸಣ್ಣ ಕೀಲುಗಳನ್ನು ಬಿಡಿಸಿ ಸೂಕ್ಷ್ಮದೃಷ್ಟಿಯಿಂದ ಅದರ ಮರ್ಮಗಳನ್ನೆಲ್ಲಾ ತಿಳಿದುಕೊಂಡು ಅಂಥ ಬಹು ಬೆಲೆಯುಳ್ಳ ಅರ್ಥವನ್ನು ಇತರರಿಗೆ ಉದಾರ ಬುದ್ಧಿಯಿಂದ ಹೇಳಿಕೊಡುವದರಿಂದ ಬೋಧಕರಾದ ವಿದ್ಯಾವಂತರಿಗೇ ಗುರು ಶಬ್ದವು ಚೆನ್ನಾಗಿ ಅನ್ವಯಿಸುವದು.

ಸತ್ ಎಂಬುದು ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಕಾರಣವಾದ ಬ್ರಹ್ಮದ ಹೆಸರು; ಬ್ರಹ್ಮವು ಮೂರು ಕಾಲಕ್ಕೂ ಇರುವಂಥದ್ದು, ಉಳಿದವುಗಳೆಲ್ಲ ಕನಸಿನ ಅಥವಾ ಮಾಯೆಯ ಜಗತ್ತಿನಂತೆ ಬರೀ ತೋರಿಕೆ. ದ್ವೈತಿಗಳ ರೀತ್ಯ ಅಥವಾ ಸರ್ವಸಾಮಾನ್ಯ ಲೋಕದೃಷ್ಟಿಯಿಂದಲೂ ಸಹ ಜಗತ್ತಿನಲ್ಲಿರುವ ಪ್ರತಿಯೊಂದು ವಸ್ತುವೂ ಕ್ಷಣಕ್ಷಣಕ್ಕೂ ನಾಶವಾಗುತ್ತಾ ರೂಪಾಂತರವನ್ನು ಪಡೆಯುತ್ತಿವೆ, ಅಂದರೆ ಅನಿತ್ಯ ಎಂದು ಎಲ್ಲ ಪಂಥದವರೂ ಒಪ್ಪುತ್ತಾರೆ. ಅಂದರೆ ನಿಜವಾಗಿರುವದು ಬ್ರಹ್ಮವೆ, ಅದು ಸತ್. ಸದ್ಗುರುವೆಂದರೆ ಬ್ರಹ್ಮಸ್ವರೂಪನಾದ ಗುರು; ಅವನೇ ಎರಡನೆಯದೇವರು. ಲೌಕಿಕ ವಿಚಾರಗಳನ್ನು ತಿಳಿಸಿ ಕೊಡುವ ಗುರುವಿನಲ್ಲಿ ನಮಗೆ ಎಷ್ಟೇ ಪೂಜ್ಯ ಬುದ್ಧಿ ಇದ್ದರೂ ಅವನು ದೇವರ ಸ್ವರೂಪವೆಂಬ ಭಾವನೆ ಹುಟ್ಟುವದಿಲ್ಲ.

ಸದ್ಗುರುವು ಅವನು ತಿಳಿಸಿಕೊಡುವದು ನಿತ್ಯಸುಖಕ್ಕೆ ಸಾಧನವಾದ ಪರಮಾತ್ಮ ವಿದ್ಯೆ. ನಿತ್ಯಸುಖವು ಬ್ರಹ್ಮಜ್ಞಾನದ ಹೊರತು ಎರಡನೆಯ ಯಾವದರಿಂದಲೂ ಬರುವದಿಲ್ಲ. ನಿತ್ಯವಾದ ಬ್ರಹ್ಮದ ಪರಿಚಯವನ್ನು ಮಾಡಿಕೊಡುವದೇ ಸದ್ಗುರುವಿನ ಸದ್ಗುರುತ್ವ.

# ರಾಮಸ್ಮರಣೆಮಾಡುವವನ ಮನಸ್ಸು ಹೇಗಿರಬೇಕು?
## (ಕಬೀರದಾಸರ ಒಂದು ಪದ)

**ತೂ ತೋ ರಾಮ ಸುಮೀರ ಜಗ ಲಡವಾ ದೇ।**
**ಕೋರಾ ಕಾಗಜ ಕಾಲೀ ಸ್ಯಾಹೀ, ಲಿಖತ ಪಢತ ವಾಕೋ ಪಢವಾ ದೇ॥**

**ಹಾಥೀ ಚಲತ ಹೈ ಅಪನೇ ಮಾರಗ, ಕುತರ ಭುಕತ ವಾಕೋ ಭೂಂಕವಾ ದೇ।**
**ಕಹತ ಕಬೀರ ಸುನೋ ಭಈ ಸಾಧೋ, ನರಕ ಪಚತ ವಾಕೋ ಪಚವಾ ದೇ॥**

**ಭಾವಾರ್ಥ:** ನಿನ್ನ ಮಟ್ಟಿಗೆ ನೀನು ರಾಮಸ್ಮರಣೆ ಮಾಡುತ್ತಿರು. ಜಗತ್ತಿನ ಜನರು ಜಗಳವಾಡುತ್ತಿರಲಿ. ಬಿಳಿಯ ಕಾಗದದ ಮೇಲೆ ಕರಿಯ ಮಸಿಯಿಂದ ಬರೆಯುತ್ತಲೂ ಬರೆದದ್ದನ್ನು ಓದುತ್ತಲೂ ಇರುವವರು ಓದುತ್ತಿರಲಿ. ನಾಯಿಗಳು ಬೊಗಳುತ್ತಲೇ ಇದ್ದರೂ ಆನೆಯು ತನ್ನ ಮಾರ್ಗದಲ್ಲಿ ತಾನು ಹೋಗುತ್ತಿರುವದು. ಅಣ್ಣಂದಿರ, ಸಾಧುಗಳಿರ, ಕಬೀರನು ಹೇಳುವದನ್ನು ಕೇಳಿ, ನರಕದಲ್ಲಿ ಬೇಯುವವರು ಬೇಯಲಿ.

ಪರಮಾತ್ಮನ ಸ್ಮರಣೆಮಾಡುವಾತನ ಮನಃಸ್ಥಿತಿಯು ಹೇಗಿರಬೇಕೆಂಬುದನ್ನು ಸಂಕ್ಷೇಪವಾಗಿ ತಿಳಿಸುವುದಕ್ಕಾಗಿ ಭಕ್ತಶ್ರೇಷ್ಠರಲ್ಲಿ ಒಬ್ಬರಾದ ಕಬೀರಜೀಯವರು ಈ ಪದವನ್ನು ಹಾಡಿರುತ್ತಾರೆ. **"ತೂ ತೋ ರಾಮ ಸುಮೀರ ಜಗ ಲಡವಾ ದೇ"** ಈ ಜಗತ್ತಿನಲ್ಲಿ ಕೆಲವರು ಧರ್ಮಧ್ವಜಿಗಳಿರುವರು. ಅವರು ಧರ್ಮವೆಂದರೆ ವಾಗ್ಯುದ್ಧವೆಂದೇ ತಿಳಿದಿರುವರು. ದೇವರು ಇರುವನೆನ್ನುವದಕ್ಕೆ ಪ್ರಮಾಣವೇನು? ದೇವರ ಲಕ್ಷಣವೇನು? ದೇವರು ಸಾಕಾರನೊ, ನಿರಾಕಾರನೊ, ಅವನು ಸಗುಣನೊ, ನಿರ್ಗುಣನೊ?—ಎಂಬಿವೇ ಮುಂತಾದ ಪ್ರಶ್ನೆಗಳನ್ನು ತೆಗೆದು 'ಈ ಲಕ್ಷಣದಲ್ಲಿ ಅವ್ಯಾಪ್ತಿ ಬರುವದು, ಆ ಲಕ್ಷಣದಲ್ಲಿ ಅತಿವ್ಯಾಪ್ತಿ ಬರುವದು'—ಎಂದು ಉದ್ದುದ್ದದ ತರ್ಕದ ಪಂಕ್ತಿಗಳನ್ನು ಒಪ್ಪಿಸುತ್ತಿರುವ ವಾಕ್ಯಾರ್ಥದ ಪಂಡಿತರಿಗೆ ಪರಮಾತ್ಮನ ಭಕ್ತಿಯ ಸವಿಯು ಎಂದಿಗೂ ತಿಳಿಯುವ ಹಾಗಿರುವದಿಲ್ಲ. ಇನ್ನೊಂದು ಬಗೆಯ ಜನರುಂಟು. ಅವರು 'ನಮ್ಮ ದೇವರು ದೊಡ್ಡವನು, ನಿಮ್ಮ ದೇವರು ಚಿಕ್ಕವನು' ಎಂದು ಕಚ್ಚಾಡುತ್ತಿರುವರು. ದೇವರಿಗೆ ರಾಮನೆಂಬ ಹೆಸರಿಡಬೇಕೆ, ರಹೀಮನೆಂಬ ಹೆಸರಿಡಬೇಕೆ? ಅವನನ್ನು ಗುಡಿಯಲ್ಲಿ ವಿಗ್ರಹಗಳ ಮೂಲಕ ಪೂಜಿಸಬೇಕೆ, ಮಸೀದಿಯಲ್ಲಿ ಪಂಚಪ್ರಾರ್ಥನೆಗಳ ಮೂಲಕ ಪೂಜಿಸಬೇಕೆ?—ಎಂಬ ವಿಷಯದಲ್ಲಿ ಇವರಿಗೆ ಯಾವಾಗಲೂ ಸಂಶಯವು ತಪ್ಪುವದೇ ಇಲ್ಲ; ಅವರ ಕಲಹಗಳು ಕೊನೆಗಾಣುವದೇ ಇಲ್ಲ. ಇಂಥವರಿಗೆ ಪರಮಾತ್ಮಭಕ್ತಿಯ ಝಳಕು ಕೂಡ ಸಿಕ್ಕಲಾರದು. ನಿಜವಾಗಿ ಪರಮಾತ್ಮನ ಭಕ್ತಿಯನ್ನು ಪಡೆದು ಆನಂದಿಸಬೇಕೆನ್ನುವವನು ಏನು ಮಾಡಬೇಕು?—ಎಂದರೆ ಕಬೀರಜಿಯವರ ಉತ್ತರವಿಷ್ಟೆ: "ತೂ ತೋ ರಾಮ ಸುಮಿರ—(ನೀನು ಮಾತ್ರ ರಾಮಸ್ಮರಣೆಯನ್ನು ಮಾಡು.)" ಮಾವಿನ

ತೋಪಿಗೆ ಹೋದವರಲ್ಲಿ ಕೆಲವರು ಅಲ್ಲಿರುವ ಗಿಡಗಳ ಸಂಖ್ಯೆಯನ್ನೂ ಒಂದೊಂದು ಗಿಡದಲ್ಲಿರುವ ಎಲೆಗಳ ಸಂಖ್ಯೆಯನ್ನೂ ಎಣಿಸುತ್ತಾ ಕೂತುಕೊಳ್ಳುತ್ತಾರೆ; ಒಬ್ಬಿಬ್ಬರು ನೆಟ್ಟನೆ ಮರವನ್ನು ಹತ್ತಿ ಹಣ್ಣನ್ನು ಕೊಯ್ದು ತಿನ್ನುತ್ತಾರೆ. ಇವರಿಬ್ಬರಲ್ಲಿ ಯಾರು ಜಾಣರು? ಈ ಪ್ರಶ್ನೆಗೆ ಉತ್ತರ ಹೇಳುವದಕ್ಕೆ ಬಹಳವಾಗಿ ಯೋಚಿಸತಕ್ಕದ್ದೇನೂ ಇಲ್ಲ. ದೃಷ್ಟಾಂತದಲ್ಲಿ ಹಣ್ಣು ತಿಂದವನೇ ಹೇಗೆ ಜಾಣನೋ ಹಾಗೆ ಇಲ್ಲಿಯೂ ದೇವರ ವಿಷಯದಲ್ಲಿ ಜಗಳವಾಡುತ್ತಾ ಕಾಲಕಳೆಯುವವರಿಗಿಂತ ಭಗವಂತನ ಸ್ಮರಣೆಯಲ್ಲಿಯೇ ಕಾಲವನ್ನು ಕಳೆಯುವವನು ಜಾಣನು. ಅವನ ಬಾಳುವೆಯು ಸಫಲವಾಗಿರುವದು.

ಇಲ್ಲಿ ಒಂದು ಸಂಶಯವು ಬರುವದು: ಪರಮಾತ್ಮನ ಸ್ವರೂಪವನ್ನು ತಿಳಿಯದೆ ಸ್ಮರಣೆಮಾಡುವದು ಹೇಗೆ? ಆತನ ಸ್ವರೂಪವನ್ನು ಶಾಸ್ತ್ರದಲ್ಲಲ್ಲವೆ ವರ್ಣಿಸಿರುವದು? ಹೀಗಿರುವಲ್ಲಿ ಶಾಸ್ತ್ರಾರ್ಥಕ್ಕೆ ಕೈ ಹಾಕಲೇಬಾರದೆಂದು ಹೇಳಿದ್ದು ಸರಿಯೆ? ಶಾಸ್ತ್ರಜ್ಞರು ದೊಡ್ಡವರಲ್ಲವೆ? ಎಂದರೆ, **"ಕೋರಾ ಕಾಗಜ ಕಾಲೀ ಸ್ಯಾಹೀ, ಲಿಖತ ಪಢತ ವಾಕೋ ಪಢವಾ ದೇ"** ಶಾಸ್ತ್ರಜ್ಞಾನವೆಂದರೇನು? ಸರಿಪಡಿಸಿದ ತಿಳಿವಳಿಕೆ. ಪರಮಾತ್ಮನ ಸ್ವರೂಪವನ್ನು ಸರಿಯಾಗಿ ತಿಳಿಯುವದಕ್ಕೆ ನಿಜವಾಗಿ ಪುಸ್ತಕ ಜ್ಞಾನವೇನೂ ಅತ್ಯವಶ್ಯವಲ್ಲ. ಪುಸ್ತಕವನ್ನು ಓದುವದು, ಬರೆಯುವದು—ಇವುಗಳು ಬಂದರೇನೂ ನಷ್ಟವಿಲ್ಲ. ಎಷ್ಟೋ ತಿಳಿವಳಿಕೆಯನ್ನು ಗ್ರಂಥಗಳಲ್ಲಿ ದೊಡ್ಡವರು ಬರೆದಿಟ್ಟಿರುತ್ತಾರೆ; ಅದನ್ನು ನಾವು ಸಂಪಾದನೆಮಾಡಿಕೊಳ್ಳುವದಕ್ಕೆ ಪುಸ್ತಕಜ್ಞಾನವು ಸಹಾಯಕವಾಗಿಯೂ ಆಗಬಹುದು. ಆದರೆ ಪುಸ್ತಕಜ್ಞಾನವಿಲ್ಲದವರಿಗೆ ಪರಮಾತ್ಮನ ಸಾಕ್ಷಾತ್ಕಾರವಾಗುವದಿಲ್ಲವೆಂಬುದು ಸುಳ್ಳು. ಬಿಳಿಯ ಕಾಗದದ ಮೇಲೆ ಕರಿಯ ಮಸಿಯಿಂದ ಒಂದಿಷ್ಟು ಬರೆಯುವದಕ್ಕಾಗಲಿ, ಅಥವಾ ಬರೆದದ್ದನ್ನು ಓದುವದಕ್ಕಾಗಲಿ ಬಂದಮಾತ್ರದಿಂದ ಪರಮಾತ್ಮನನ್ನು ಕಂಡುಕೊಳ್ಳುವದಕ್ಕೆ ಹೆಚ್ಚಿನ ಸಾಧನವಾಗುವದೆಂಬ ಭರವಸೆಯೂ ಇಲ್ಲ. ಇದಕ್ಕೆ ಬದಲು ಎಷ್ಟೋ ಜನರು ಈ ಓದುಬರಹದ ನೆಪದಿಂದ ಲೋಕವಾಸನೆಯನ್ನು ಬೆಳೆಸಿಕೊಂಡು ಪರಮಾತ್ಮನನ್ನು ಅತ್ಯಂತವಾಗಿ ಮರೆತರೂ ಮರೆತುಬಿಡಬಹುದು. ಆದ್ದರಿಂದ ನಿಜವಾಗಿ ಪರಮಾತ್ಮ ಭಕ್ತಿಯನ್ನು ಸಂಪಾದಿಸಿಕೊಳ್ಳಲು ಏನು ಮಾಡಬೇಕು? ತನಗೆ ಎಷ್ಟೇ ಪುಸ್ತಕಜ್ಞಾನವಿರಲಿ, ಅದರ ಅಭಿಮಾನವನ್ನೆಲ್ಲ ಒತ್ತಟ್ಟಿಗಿಟ್ಟು ಸದ್ಗುರುವಿನ ಬಳಿಗೆ ಹೋಗಬೇಕು; ಆತನ ಉಪದೇಶವನ್ನು ಶ್ರವಣಮಾಡಬೇಕು; ಆತನ ವಚನವನ್ನು ತನ್ನ ಹೃದಯವೆಂಬ ಕಾಗದದ ಮೇಲೆ ಬರೆದುಕೊಳ್ಳಬೇಕು; ಅದನ್ನು ಅಡಿಗಡಿಗೆ ತನ್ನಲ್ಲಿ ತಾನು ಓದಿಕೊಳ್ಳುತ್ತಾ ಇರಬೇಕು. ಇದರಿಂದ ಪರಮಾತ್ಮನ ಸ್ವರೂಪವೂ ನಿಜವಾದ ಸ್ಮರಣೆಯೂ ಅಳವಡುತ್ತವೆ.

ಓದು ಬರಹದಲ್ಲಿ ಅಭಿರುಚಿಯನ್ನು ಬಿಟ್ಟರೆ, ಜನರು ಮಾಡುವ ವಾಕ್ಯಾರ್ಥಗಳಲ್ಲಿ ನಾವು ಭಾಗವನ್ನು ವಹಿಸದೆ ಇದ್ದರೆ, ಲೋಕವು ನಮ್ಮನ್ನು ಕಂಡು ಏನೆನ್ನುವರೊ! ಪ್ರಪಂಚದಲ್ಲಿ ಒಬ್ಬನಾಗಿ ಬಾಳಬೇಕೆನ್ನುವವನು ಪ್ರಪಂಚವನ್ನೇ ಬಿಟ್ಟು

ಬಾಳುವದಕ್ಕಾದೀತೆ?—ಎಂದರೆ, ಇದಕ್ಕೆ ಉತ್ತರ: **"ಹಾಥೀ ಚಲತ ಹೈ, ಅಪನೇ ಮಾರಗ, ಕುತರ ಭುಕತ ವಾಕೋ ಭುಕವಾ ದೇ"** ಮನುಷ್ಯನು ತಾನು ಆರಿಸಿಕೊಂಡಿರುವ ವ್ಯವಹಾರದ ಮಾರ್ಗವು ಸರಿಯೆ, ತಪ್ಪೆ—ಎಂಬುದನ್ನು ನಿಶ್ಚಯಿಸಿಕೊಳ್ಳಬೇಕೇ ಹೊರತು ಉಳಿದ ಜನರು ಏನೆನ್ನುವರು?—ಎಂಬುದನ್ನೇನೂ ಯೋಚಿಸಬೇಕಾದದ್ದಿಲ್ಲ. ಲೋಕದಲ್ಲಿ ಜನರು ತಮ್ಮ ತಮ್ಮ ಮನಸ್ಸಿಗೆ ಸರಿಯೆಂದು ತೋರುವ ವೃತ್ತಿಯನ್ನು ಹಿಡಿಯುವರೇ ಹೊರತು ನೆರೆಯವರು ಏನೆನ್ನುವರೆಂದು ಯಾರೂ ಎಂದೂ ಯೋಚಿಸುವದಿಲ್ಲ. ಇದಲ್ಲದೆ ಸರಿಯಾದ ನಡತೆಯವರ ಜೊತೆಯಲ್ಲಿರುವವರಿಗೆ ಕೆಟ್ಟ ಮಾರ್ಗಕ್ಕೆ ಬೀಳುವೆವೆಂಬ ಹೆದರಿಕೆಗೇನೂ ಕಾರಣವಿರುವದಿಲ್ಲ. ಸದ್ಗುರುವು ತೋರಿಸಿಕೊಟ್ಟಿರುವ ಉತ್ತಮವಾದ ಮಾರ್ಗದಿಂದ ನಡೆದುಕೊಂಡು ರಾಮಸ್ಮರಣೆಯನ್ನು ಮಾಡುತ್ತಿರುವಾತನಿಗೆ ಸಾಧುಗಳ ಪ್ರಶಂಸೆಯೇ ಆಗುವುದೇ ಹೊರತು ಕೆಟ್ಟ ಹೆಸರು ಎಂದಿಗೂ ಬರಲಾರದು. ಪರಮಾತ್ಮನು ರಾಮನು; ಆತನ ಹೆಸರನ್ನು ಕೇಳಿದ ಸಜ್ಜನರಿಗೆಲ್ಲ ಮನಸ್ಸು ಸಂತೋಷದಿಂದ ಉಕ್ಕಿಹರಿಯುವದು, ಆತನಲ್ಲಿಯೇ ಅವರ ಮನಸ್ಸು ರಮಿಸುತ್ತಿರುವದು. ಇನ್ನು ದುರ್ಜನರು ಏನೆಂದಾರೆಂಬ ಹೆದರಿಕೆಯೇನು? ಅದನ್ನು ನಿಜವಾದ ಭಕ್ತನು ಲೆಕ್ಕಕ್ಕೇ ತೆಗೆದುಕೊಳ್ಳುವದಿಲ್ಲ: ದಾರಿಯಲ್ಲಿ ಹೋಗುತ್ತಿರುವ ಅರಸನ ಪಟ್ಟದಾನೆಯು ಅಲ್ಲಲ್ಲಿ ಬೊಗಳುತ್ತಿರುವ ನಾಯಿಗಳ ಕೂಗನ್ನು ಕಿವಿಗಳಿಗೆ ಹಾಕಿಕೊಳ್ಳುವದೆ? ದುರ್ಜನರೇ ಇವನನ್ನು ನೋಡಿ ತಮ್ಮ ನಡತೆಯನ್ನು ಸರಿಪಡಿಸಿಕೊಳ್ಳುವ ಸಂಭವವೂ ಉಂಟು. ರಾಮಸ್ಮರಣೆಯ ಮಹಿಮೆಯು ಅಂಥದ್ದು!

ಆದ್ದರಿಂದ ಫಲಿತಾಂಶವೇನೆಂದರೆ: **"ಕಹತ ಕಬೀರ ಸುನೋ ಭಈ ಸಾಧೋ, ನರಕ ಪಚತ ವಾಕೋ ಪಚವಾ ದೇ"** ಸಾಧುಗಳಿರ, ಕಬೀರನು ಹೇಳುವ ಮಾತನ್ನು ಕೇಳಿರಿ. ಧರ್ಮದ ವಿಷಯವಾಗಿ ಜಗಳವಾಡುತ್ತಾ ಕಚ್ಚಾಡುತ್ತಲೂ, ಶಾಸ್ತ್ರಾರ್ಥಗಳನ್ನು ತಿಳಿಯುವದಕ್ಕೆಂದು ಓದುಬರಹದಲ್ಲಿ ಮುಳುಗಿ ತೇಲುತ್ತಲೂ, ಅವರಿವರ ನಡತೆಯನ್ನು ನಿಂದಿಸುವ ಕಾಡುಹರಟೆಗಳನ್ನಾಡುತ್ತಲೂ ಕಾಲಹಾಕುವವರು ಹಾಕಲಿ; ನಿಜವಾಗಿ ಅದೊಂದು ಬಗೆಯ ನರಕವು; ಅವರು ಅದರೊಳಗೆ ಬಿದ್ದು ಬೇಯುತ್ತಿರಲಿ. ನೀವು ಮಾತ್ರ ರಾಮಸ್ಮರಣೆ ಮಾಡಿರಿ. ರಾಮಸ್ಮರಣೆಯೆಂಬುದು ಪ್ರತ್ಯಕ್ಷಸ್ವರ್ಗಸುಖಕ್ಕಿಂತಲೂ ಹೆಚ್ಚಿನ ಆನಂದವನ್ನು ಸೂರೆಗೊಡುವ ವೈಕುಂಠಪದವಿಯು; ಅದರಲ್ಲಿ ನೀವು ವಾಸವಾಗಿರಿ. ನೀವು ಹೀಗೆ ಆನಂದಪಡುವಾಗ ನಿಮ್ಮ ಮೈಮೇಲಿನ ಗಾಳಿಯು ಮಿಕ್ಕವರಿಗೆ ಸೋಕಿದರೆ ಸಾಕು, ಅವರೂ ರೋಮಾಂಚನವನ್ನು ತಳೆದು ಸುಖಿಸುವರು; ರಾಮಸ್ಮರಣೆಯೇ ಜಗತ್ತಿನ ಕಲ್ಯಾಣಕ್ಕೆ ಕಾರಣವೆಂಬುದನ್ನು ಅವರೂ ಕಂಡುಕೊಳ್ಳುವರು.

# ಸಂಧ್ಯಾವಂದನೆ

## ಶ್ರೀ ಸುಬ್ರಹ್ಮಣ್ಯ

ವೇದೋಕ್ತಕರ್ಮಗಳಲ್ಲೆಲ್ಲ ಸಂಧ್ಯಾವಂದನೆಯು ಮೊದಲನೆಯದಾಗಿಯೂ ವೇದದಲ್ಲಿ ಹೇಳಿರುವ ಧರ್ಮದ ಸಾರವನ್ನೆಲ್ಲ ಒಳಕೊಂಡಿರುವದಾಗಿಯೂ ಇರುವದು. "ಸಂಧ್ಯಾವಂದನೆ" ಎಂಬ ಶಬ್ದವು ಈಚಿನದೆಂದು ತೋರುತ್ತಿದೆ. ಶ್ರುತಿಯಲ್ಲಿಯೂ ಸ್ಮೃತಿಯಲ್ಲಿಯೂ ಈ ಕರ್ಮಕ್ಕೆ ಸಂಧ್ಯಾ ಎಂದೇ, ಸಂಧ್ಯೆ ಎಂಬುದು ಒಂದು ಕ್ರಿಯೆಯ ಹೆಸರೆಂಬುದು ಸ್ಪಷ್ಟವಾಗಿದೆ. ಆದರೆ ಈಚೆಗೆ ಸಂಧ್ಯಾ ವಂದನೆಯೆಂಬ ಹೆಸರು ರೂಡಿಯಲ್ಲಿದೆ. ಇಲ್ಲಿ ಸಂಧ್ಯಾಯೆಂದರೆ ಈ ಕರ್ಮದಲ್ಲಿ ನಾವು ಉಪಾಸನೆಮಾಡುವ ದೇವತೆಯ ಹೆಸರು: ವಸಿಷ್ಠಸ್ಮೃತಿಯಲ್ಲಿ ಹೇಳಿರುವು ದೇನೆಂದರೆ "ಸಂಧ್ಯೆಯೆಂದರೆ ಜಗತ್ತಿಗೆಲ್ಲ ಕಾರಣವಾಗಿರುವ ಮಾಯೆಗೆ ಅತೀತ ವಾಗಿರುವ ನಿಷ್ಕಲವಾದ ಈಶ್ವರಶಕ್ತಿ; ಈ ದೇವತೆಯನ್ನು ಸೂರ್ಯಮಂಡಲದಲ್ಲಿರು ವಂತೆ ಧ್ಯಾನಮಾಡುತ್ತಾ ಗಾಯತ್ರೀ ಮಂತ್ರವನ್ನು ಜಪಿಸಬೇಕು." ಅಂತೂ ಸಂಧ್ಯಾ ವಂದನೆಯೆಂದರೆ ಗೊತ್ತಾದ ಕಾಲದಲ್ಲಿ ದ್ವಿಜರೆಲ್ಲರೂ ನಡೆಸುವ ಈಶ್ವರಧ್ಯಾನ.

ಸಂಧ್ಯಾವಂದನೆಯು ಬ್ರಾಹ್ಮಣನಿಗೆ ಏಳು ತುಂಬಿ ಎಂಟನೆಯ ವರ್ಷದಲ್ಲಿ ಪ್ರಾರಂಭವಾಗುವದು; ಕ್ಷತ್ರಿಯ ವೈಶ್ಯರಿಗೆ ಸ್ವಲ್ಪ ಹೆಚ್ಚು ಕಾಲದ ಮೇಲೆ ಪ್ರಾರಂಭಿ ಸುವುದು. ಅಂತೂ ಇದು ಚಿಕ್ಕ ವಯಸ್ಸಿನಲ್ಲಿ ಪ್ರಾರಂಭವಾಗುವ ಕರ್ಮವಷ್ಟೇ. "ಯಾವನು ಸಂಧ್ಯೆಯನ್ನು ಆಚರಿಸಲಿಲ್ಲವೋ ಆತನು ಅಶುಚಿಯು, ಆತನು ಎಂದೂ ಯಾವ ಕರ್ಮಕ್ಕೂ ಯೋಗ್ಯನಾಗನು, ಬೇರೆಯ ಕರ್ಮವನ್ನನುಸರಿಸಿದರೂ ಅದರ ಫಲವೂ ಆತನಿಗೆ ದಕ್ಕಲಾರದು" ಎಂದು ದಕ್ಷಸ್ಮೃತಿಯಲ್ಲಿ ಹೇಳಿರುವದು. ಯಾವ ವ್ರತಾದಿ ಕಾಮ್ಯಕರ್ಮಗಳನ್ನು ಹೇಳಿದರೂ ಯಾವ ಉಪಾಸನಾದಿ ಚಿತ್ತಶುದ್ಧಿಯ ಸಾಧನೆಗಳನ್ನು ಹೇಳಿದರೂ ಮೊದಲು ವಿಧ್ಯುಕ್ತವಾದ ಸಂಧ್ಯೆ ಮೊದಲಾದ ಕರ್ಮ ಗಳನ್ನು ಆಚರಿಸಿ ಶುದ್ಧನಾಗಿ ಮುಂದಿನ ಕರ್ಮಕ್ಕೆ ಕೈಹಾಕಬೇಕೆಂದು ಶಾಸ್ತ್ರಕಾರರು ನಿಯಮಿಸಿರುವರು. ಇಷ್ಟು ಹೆಚ್ಚಿನ ಮಹಿಮೆಯು ಸಂಧ್ಯೆಯಲ್ಲಿ ಬರುವುದಕ್ಕೆ ಕಾರಣ?

ಛಾಂದೋಗ್ಯ ಉಪನಿಷತ್ತಿನಲ್ಲಿ "ಕಶ್ಯಪಪ್ರಜಾಪತಿಯು ಲೋಕಗಳ ಸಾರವೇ ನೆಂದು ಚೆನ್ನಾಗಿ ಧ್ಯಾನಮಾಡಿ ನೋಡಲಾಗಿ ಮೂರು ವೇದಗಳು ಕಾಣಿಸಿಕೊಂಡವು, ಇವುಗಳ ಸಾರವೇನೆಂದು ಗ್ರಹಿಸಲು ಯತ್ನಿಸಲಾಗಿ ಭೂರಾದಿಯಾಗಿ ಮೂರು ವ್ಯಾಹೃತಿಗಳು ಹೊರಹೊಮ್ಮಿದ್ದವು. ಇವುಗಳ ಸಾರವೇನೆಂದು ನೋಡಲಾಗಿ ಓಂಕಾರವು ಹೊರಬಿತ್ತು. ಹೀಗೆ ಓಂಕಾರವೇ ಎಲ್ಲ ವಾಕ್ಪ್ರಪಂಚದಲ್ಲಿಯೂ ಎಲೆಯಲ್ಲಿ ಅದರ ನಾಳವು ಹೆಣೆದುಕೊಂಡಿರುವಂತೆ ಹೆಣೆದುಕೊಂಡಿರುವದು" ಎಂದು ವಚನ ವಿರುವದು. ಸಂಧ್ಯಾವಂದನೆಯ ಸಾರವಾದ ಗಾಯತ್ರಿಯಲ್ಲಿ ಈ ಲೋಕವೇದಗಳ

ಸಾರವು ಅಡಗಿಕೊಂಡಿರುವದು. ಹೇಗೆ ಕೊಂಬೆರೆಂಬೆಗಳಾಗಿ ಒಡೆದುಕೊಂಡಿರುವ ವೃಕ್ಷಕ್ಕೆ ಬೇರೆಂಬುದು ಸಾರವೋ ಆ ಬೇರಿಗೂ ಬೀಜವೇ ಹೇಗೆ ಸಾರವೋ, ಹಾಗೆ ವೈದಿಕವಿದ್ಯೆಯಲ್ಲಿ ಹೇಳಿರುವ ಪ್ರಪಂಚವೃಕ್ಷಕ್ಕೆಲ್ಲ ಗಾಯತ್ರಿಯು ಸಾರವಾಗಿರುವದು. ಬೀಜವನ್ನು ಹಾಕದೆ ಎಷ್ಟು ಉಕ್ಕೆಮಾಡಿ, ಗೊಬ್ಬರವನ್ನು ಹಾಕಿ, ನೀರು ಹಾಯಿಸಿದರೂ ಪೈರು ಕಾಣುವದು ಹೇಗೆ ದುರ್ಲಭವೋ ಹಾಗೆ ಅಧ್ಯಾತ್ಮವಿದ್ಯೆಗೆಲ್ಲ ಸಾರವಾಗಿ ವೇದದಲ್ಲಿ ಪ್ರತಿಪಾದಿಸುವ ಗಾಯತ್ರಿಯ ಉಪಾಸನೆಯನ್ನು ಮಾಡದೆ ಮಿಕ್ಕ ಕರ್ಮಗಳನ್ನು ಮಾಡುವದು ವ್ಯಥಾಶ್ರಮವಾಗುವದು.

ಸಂಧ್ಯಾವಂದನೆಯು ಇಷ್ಟು ಮಹತ್ತ್ವದ ಕರ್ಮವಾಗಿರಲು ಮತ್ತೊಂದು ಕಾರಣವೂ ಉಂಟು. ಅದೇನೆಂದರೆ ಯೂನಿವರ್ಸಿಟಿಯೆಂಬ ಸಕಲವಿದ್ಯಾನಿಲಯ ಪ್ರವೇಶಕ್ಕೆ ಮೊದಲು ನಡೆಯುವ ಯೋಗ್ಯತಾನಿರ್ಣಯಪರೀಕ್ಷೆಗೆ, ಮುಂದೆ ವಿಸ್ತಾರ ವಾಗಿ, ನಡೆಯಬೇಕಾದ ಪಾಠಗಳ ಸಾರವನ್ನು ತಿಳಿದಿರುವದದವಶ್ಯವಾಗಿರುವದಲ್ಲವೆ, ಇದರಂತೆಯೆ ಸಂಧ್ಯಾವಂದನೆಯೂ ಅಧ್ಯಾತ್ಮವಿದ್ಯಾನಿಲಯಕ್ಕೆ ಪ್ರವೇಶಪರೀಕ್ಷೆ ಯಾಗಿರುವದು. ಇದರಲ್ಲಿ ಅಧ್ಯಾತ್ಮವಿದ್ಯೆಗೆ ಬೇಕಾದ ಸಾಧನೆಗಳು ಎಲ್ಲವೂ ಸ್ವಲ್ಪ ಸ್ವಲ್ಪವಾಗಿ ಅಡಕವಾಗಿರುವವು. ಅರ್ಥವನ್ನು ತಿಳಿದುಕೊಂಡು ಇದನ್ನು ಕೆಲಕಾಲ ಅನುಷ್ಠಾನ ಮಾಡಿದವರು ಮುಂದೆ ವಿಶೇಷವಾಗಿ ಆ ವಿದ್ಯೆಯ ಪ್ರಧಾನಭಾಗಗಳಲ್ಲಿ ವಿಶಾರದರಾಗಲು ಯತ್ನಿಸಬಹುದು. ಹೇಗೆಂದರೆ ಅಧ್ಯಾತ್ಮವಿದ್ಯೆಗೆ ಈ ಜಗತ್ತಿ ನಲ್ಲಿರುವ ಅಧಿಕಾರಿಗಳ ಮನಸ್ಸುಗಳನ್ನು ಸಾಮಾನ್ಯವಾಗಿ ನಾಲ್ಕು ಪಂಗಡಗಳಾಗಿ ವಿಂಗಡಿಸಬಹುದು. ಕೆಲವರಿಗೆ ಕೆಲಸದಲ್ಲಿ ಆದರ, ಕೆಲವರಿಗೆ ಜನರಲ್ಲಿ ಪ್ರೇಮವನ್ನು ಇಡುವ ಇಚ್ಛೆ, ಇನ್ನು ಕೆಲವರಿಗೆ ತಮ್ಮೊಳಗೆ ತಾವು ಧ್ಯಾನಮಾಡುತ್ತಿರಬೇಕೆಂಬ ಆಸೆ, ಮತ್ತೂ ಕೆಲವರಿಗೆ ತತ್ತ್ವವಿಚಾರದಲ್ಲಿ ಆಸಕ್ತಿ. ಈ ನಾಲ್ಕು ಬಗೆಯ ಅಧಿಕಾರಿಗಳಿಗೆ ತಕ್ಕಂತೆ ನಾಲ್ಕು ವಿಧವಾದ ಸಾಧನಗಳನ್ನು ನಮ್ಮ ಪೂರ್ವಜರಾದ ಋಷಿಗಳು ಕಲ್ಪಿಸಿರುತ್ತಾರೆ. ಕೆಲಸಕ್ಕಾಗಿ ಕೆಲಸ ಮಾಡುವವರಿಗೆ ಕರ್ಮಯೋಗ, ಪ್ರೇಮವೃತ್ತಿ ಯನ್ನು ಬೆಳೆಸುವವರಿಗೆ ಭಕ್ತಿಯೋಗ, ಭಾವನೆಯಲ್ಲಿ ಆಸಕ್ತಿಯಿರುವವರಿಗೆ ಧ್ಯಾನ ಯೋಗ, ವಿಚಾರದಲ್ಲಿಯೇ ನಿರತರಾಗಿರಬೇಕೆಂಬವರಿಗೆ ಜ್ಞಾನಯೋಗ. ಈ ನಾಲ್ಕು ವಿಧವಾದ ಯೋಗಗಳೂ ಪ್ರಕೃತವಾದ ಸಂಧ್ಯೆಯಲ್ಲಿ ಬೀಜರೂಪವಾಗಿ ಇದ್ದು ಕೊಂಡಿರುತ್ತವೆ. ಉದಾಹರಣೆಗೆ ನೋಡಿ: ಆಚಮನ, ಮಾರ್ಜನ, ನಮಸ್ಕಾರ ಮುಂತಾದವು ಕರ್ಮಯೋಗದ ಬೀಜ; ಆಸನ ಪ್ರಾಣಾಯಾಮಗಳು ಧ್ಯಾನಯೋಗ ಬೀಜ; ಕೇಶವಾದಿನಾಮಸ್ಮರಣೆ, ಕೊನೆಯಲ್ಲಿ ಹೇಳುವ ಪರಮಾತ್ಮಮಹಿಮಾ ವರ್ಣನರೂಪವಾದ ಪುರಾಣಶ್ಲೋಕಗಳು—ಇವು ಭಕ್ತಿಯೋಗ ಬೀಜ; ಸಂಧ್ಯಾ ವಂದನೆಯ ಸಾರವಾಗಿರುವ ಗಾಯತ್ರಿಯು ಜ್ಞಾನಯೋಗದ ಬೀಜವು. ಹೀಗೆ ನಾಲ್ಕೂಯೋಗದ ಬೀಜವು ಈ ಸಂಧ್ಯಾವಂದನೆಯಲ್ಲಿರುವದೂ ಇದರ ಹೆಚ್ಚಿಗೆಗೆ ಒಂದು ಕಾರಣವಾಗಿರುವದು.

ಸಂಧ್ಯಾವಂದನೆಯಲ್ಲಿರುವ ಮತ್ತೊಂದು ಸ್ವಾರಸ್ಯ ಈ ಭೌತಿಕಪ್ರಪಂಚದಲ್ಲಿ

ಕಾಣುವ ವೈಚಿತ್ರ್ಯಕ್ಕೆಲ್ಲ ಸೂರ್ಯನೇ ಮೂಲಸ್ಥಾನ. ಸೂರ್ಯನೇ ನಮಗೆ ಬೆಳಕಿಗೂ ಔಷ್ಣ್ಯಕ್ಕೂ ಮೂಲಸ್ಥಾನನಾಗಿರುವನು. ಸೂರ್ಯನ ಬೆಳಕಿನಿಂದ ನಮ್ಮ ವ್ಯವಹಾರಗಳೆಲ್ಲ ಸಾಗುವವು, ಸೂರ್ಯನ ಔಷ್ಣ್ಯದಿಂದ ಜಗತ್ತಿನ ಸಸ್ಯವರ್ಗವೂ ಪ್ರಾಣಿವರ್ಗವೂ ಪೋಷಣದ್ರವ್ಯವನ್ನು ಪಡೆಯುವದು. "ಜಗತ್ತಿಗೆಲ್ಲ ಕಣ್ಣು" ಎಂದು ಈ ಸೂರ್ಯನಿಗೆ ಶಾಸ್ತ್ರದಲ್ಲಿ ಬಂದಿರುವ ಹೆಸರು ಅನ್ವರ್ಥವಾಗಿರುವದು. ಇಂಥ ಪರಿಶುದ್ಧಪ್ರಚಂಡಪ್ರಕಾಶದ ಮಂಡಲವಾದ ಈ ಸೂರ್ಯನನ್ನು ಅಧ್ಯಾತ್ಮವಿದ್ಯೆಗೆಲ್ಲ ಧ್ಯೇಯವಾಗಿರುವ ಪರಬ್ರಹ್ಮಮೂರ್ತಿಯ ಚಿಹ್ನೆಯಾಗಿಯೂ ಸ್ಥಾನವಾಗಿಯೂ ಉಪದೇಶಮಾಡುವದು ಸಂಧ್ಯಾವಂದನೆಯ ಮುಖ್ಯೋದ್ದೇಶಗಳಲ್ಲಿ ಒಂದಾಗಿದೆ. ಲೋಕವಿಲಕ್ಷಣವಾಗಿ ಲೋಕಕ್ಕೆಲ್ಲ ಆಧಾರವಾಗಿ ಚೈತನ್ಯಪ್ರಕಾಶದಿಂದ ಕೂಡಿ ಸಮಸ್ತ ಜೀವರ ಬುದ್ಧಿಪ್ರೇರಣೆಯನ್ನೂ ಮಾಡುವ ಅಂತರ್ಯಾಮಿಯಾದ ಪರಮೇಶ್ವರನೇ ಸೂರ್ಯಮಂಡಲದಲ್ಲಿರುವ ನಾರಾಯಣಸ್ವಾಮಿಯೆಂದು ಈ ಕರ್ಮವು ನೆನಪು ಕೊಡುವದು. ಅನಾದಿಕಾಲದಿಂದಲೂ ಪ್ರಖ್ಯಾತವಾದ ಈ ವೈದಿಕಕರ್ಮದ ಮಹತ್ತ್ವವನ್ನು ವೇದವು ಹೀಗೆಂದು ಕೊಂಡಾಡಿರುವದು.

**ಉದ್ಯಂತಮಸ್ತಂಯಂತಮಾದಿತ್ಯಮಭಿಧ್ಯಾಯನ್ ಕುರ್ವನ್ ಬ್ರಾಹ್ಮಣೋ ವಿದ್ವಾನ್ಸಸ್ಸಕಲಂ ಭದ್ರಮಶ್ನುತೇಸಾವಾದಿತ್ಯೋ ಬ್ರಹ್ಮೇ, ಬ್ರಹ್ಮೈತಿವ ಸನ್ ಬ್ರಹ್ಮಾಪ್ಯೇತಿ ಯ ಏವಂ ವೇದ॥**

ಉದಯಿಸುತ್ತಲೂ ಅಸ್ತಮಿಸುತ್ತಲೂ ಇರುವ ಆದಿತ್ಯನನ್ನು ಧ್ಯಾನಮಾಡುತ್ತಾ ಕರ್ಮಮಾಡುವ ಬ್ರಾಹ್ಮಣನು ತತ್ತ್ವವನ್ನು ತಿಳಿದು ಸಕಲವಾದ ಮಂಗಲವನ್ನೂ ಪಡೆಯುವನು. ಈ ಆದಿತ್ಯನೇ ಬ್ರಹ್ಮನು, ಹೀಗೆಂದು ಯಾವನು ತಿಳಿಯುವನೋ ಆತನು ಮೊದಲೇ ಬ್ರಹ್ಮವಾಗಿದ್ದು ಬ್ರಹ್ಮದಲ್ಲಿಯೇ ಸೇರಿಕೊಳ್ಳುವನು.

ಅವಿದ್ಯಾಕರ್ಮಗಳೆಂಬ ಕಾಡುಮೇಡುಗಳ ರಸ್ತೆಯಿಂದ ಬಿಡಿಸಿ, ಜಿಜ್ಞಾಸುವನ್ನು ತತ್ತ್ವವಿಚಾರವೆಂಬ ರಾಜಮಾರ್ಗಕ್ಕೆ ತರುವವನೇ ಗುರುವು. ಬ್ರಹ್ಮಾನುಭವಿಯಾದ ಮಹಾತ್ಮನೇ ಸದ್ಗುರುವು. ಯೋಗಿಯು ಉಪನಿಷತ್ತುಗಳಲ್ಲಿಯೂ ಪಾಂಡಿತ್ಯವನ್ನು ಸಂಪಾದಿಸಿದವನಾಗಿದ್ದರೆ ಶ್ರೋತ್ರಿಯ ಬ್ರಹ್ಮನಿಷ್ಠನೆನಿಸುತ್ತಾನೆ. ಉಪದೇಶಕನಾದ ಗುರುವು ಸೂಚಕನಾಗಬಲ್ಲನೇ ಹೊರತು ಕಾರಕನಾಗಲಾರನು. ಮುಮುಕ್ಷುವಿನ ಮನಸ್ಸು ಸಾಧಕವಾದರೆ ಜ್ಞಾನಕಾರಕವಾಗುವದರಿಂದ ಆಗ ಅವನಿಗೆ ಸದ್ಗುರುವು ತಾರಕನಾಗುತ್ತಾನೆ. ಯಾರಿಗಾದರೂ ಅವನ ಮನಸ್ಸೇ ನಿಜವಾದ ಗುರುವು. ಪ್ರತಿಯೊಬ್ಬರ ಹೃದಯವೆಂಬ ಬಾವಿಯಲ್ಲಿರುವ ಆನಂದಾಮೃತರಸವನ್ನು ತೋರಿಸುವವನೇ ಸದ್ಗುರುವು, ಇದನ್ನು ಸೇವಿಸವ ಶುದ್ಧ ಮನಸ್ಸೇ ಮುಖ್ಯಗುರವು. ಸಕಲ ಪ್ರಾಣಿಗಳ ಹೃದಯದಲ್ಲಿಯೂ ಇರುವ ಸರ್ವಾಂತರ್ಯಾಮಿಯೇ ಜಗದ್ಗುರುವು. —ಶ್ರೀ ನಿತ್ಯಾನಂದರು

# ಸ್ವಾಮಿ ರಾಮತೀರ್ಥರ ಲಹರಿ

ಧರ್ಮಮಾರ್ಗದಲ್ಲಿ ನಡೆಯುವದಕ್ಕಾಗಿ, ಸತ್ಯವನ್ನು ಅನುಭವಕ್ಕೆ ತಂದು ಕೊಳ್ಳುವದಕ್ಕಾಗಿ ಎಲ್ಲಾ ಆಸಕ್ತಿಗಳನ್ನೂ ಬಿಡಬೇಕು; ಪ್ರಾಪಂಚಿಕ ಆಶೆಗಳನ್ನೂ ಸ್ವಾರ್ಥಕ್ಕಾಗಿ ಅಂಟಿಕೊಂಡಿರುವ ಅಭಿಮಾನಗಳನ್ನೂ ಮೆಟ್ಟಿ ಮೇಲೇರಬೇಕು. ಅದರೊಡನೆ ರಾಗದ್ವೇಷಗಳನ್ನೂ ಕಿತ್ತೆಸೆದು, ಬೆಳಕಿನ ಬಯಕೆಯನ್ನೂ ಬಿಟ್ಟು ಒಂದು ಕ್ಷಣ ಓಂಕಾರವನ್ನುಚ್ಚರಿಸುತ್ತಾ ಕುಳಿತು ನಿನ್ನೊಳಗೆ ನೀನು ಯಾರೆಂದು ವಿಚಾರಿಸು. ನಿಮ್ಮ ದಿವ್ಯತೆಯಲ್ಲಿ ನೀವು ಆನಂದ ಪಡಿರಿ, ನಿಮ್ಮಸಂತೋಷವು ನಿಮ್ಮ ಒಳಗಿನಿಂದಲೇ ಉಕ್ಕಿಬರಬೇಕು. ನಿಮ್ಮ ಆತ್ಮಸ್ವರೂಪದಲ್ಲಿಯೇ ನೀವು ಆನಂದಪಡಬೇಕು.

ನಿಮ್ಮ ಕರ್ತವ್ಯ ಕರ್ಮವನ್ನು ನಿಷ್ಕಾಮ ಬುದ್ಧಿಯಿಂದ ಮಾಡಿ, ಆತ್ಮಾನುಭವಕ್ಕೂ ಆತ್ಮಾನಂದಕ್ಕೂ ಇನ್ನೊಂದು ಹೆಸರೇ ಕರ್ಮ, ಕರ್ಮಯೋಗ ಎನ್ನಬಹುದು. ಕರ್ಮಮಾಡುತ್ತಿರುವದೇ ಒಂದು ಸಂತೋಷ. ಕರ್ಮವು ಆತ್ಮಾನುಭವಕ್ಕೆ ಒಯ್ಯುತ್ತದೆ. ಸಾಧನವಾಗುತ್ತವೆ. ಯಾವ ಕರ್ಮವನ್ನಾದರೂ ದೇವರ ಪೂಜೆಯೆಂದು ಮಾಡಬೇಕು, ಧಾರ್ಮಿಕ-ದೈವಿಕ-ಪವಿತ್ರಭಾವನೆಯಿಂದ ಮಾಡಬೇಕು. ಆದರೆ ಬಿಡುವಿದ್ದಾಗ ಏಕಾಂತದಲ್ಲಿ ನಿಮ್ಮ ಆತ್ಮಸ್ವರೂಪದ ಆನಂದದಲ್ಲಿ ಮುಳುಗಿರಿ, ದೇವತ್ವವನ್ನು ಸವಿಯಿರಿ. ಎಲ್ಲಾ ಆಶೆ-ಆಸಕ್ತಿಗಳನ್ನೂ ತ್ಯಾಗಮಾಡಿದ ಕೂಡಲೇ ನೀವು ಮುಕ್ತರೂ ಸ್ವತಂತ್ರರೂ ಆಗಿರುವದನ್ನು ಮನಗಾಣುತ್ತೀರಿ, ನಿಮ್ಮ ಹೆಗಲ ಮೇಲೆ ಹೊರೆಯಾಗಲೀ, ತಲೆಯ ಮೇಲೆ ಹೊಣೆಗಾರಿಕೆಯೂ ಇಲ್ಲವೆಂದು ಕಾಣುತ್ತೀರಿ. ಆ ಹೊರೆ ಹೊಣೆಗೆ ನೀವೇ ಕಾರಣ. ಅದ್ಯಾವುದೂ ಇಲ್ಲವೆಂದೂ, ಎಲ್ಲ ಪ್ರೀತಿಯ ವಸ್ತುಗಳೂ ಜೊತೆಯಲ್ಲೇ ಇರುವವೆಂದೂ ತಿಳಿದು ಈ ವೇದಾಂತದಲ್ಲಿ ನೀವು ಜೀವಿಸುವದಾದರೆ ನಿಮ್ಮ ಇಡೀ ಬಾಳೇ ಬೆಳಕಾಗುತ್ತದೆ. ಆತ್ಮಸಾಮ್ರಾಜ್ಯ ಆನಂದಸಾಮ್ರಾಜ್ಯಕ್ಕಾಗಿ ಹಂಬಲಿಸುವಿರಾದರೆ ನಿಮ್ಮ ಮನಸ್ಸಿನ ಸರೋವರದಲ್ಲೇ ನಿಮ್ಮ ಒಳಗೇ ಆಳವಾಗಿ ಧುಮುಕಿ ತಳವನ್ನು ಸೇರಿ ಕಾಮ ಮೋಹಗಳೆಂಬ ವಿಷಸರ್ಪವನ್ನು ಮಂತ್ರಜಪದಿಂದ ಮರುಳು ಮಾಡಿ ಅದರ ಸಹಸ್ರ ಸಹಸ್ರ ಹೆಡೆಗಳನ್ನು ತುಳಿದು ನಾಶಮಾಡಿರಿ. ಓಂಕಾರವನ್ನು ಉಚ್ಚಾರ ಮಾಡುತ್ತ ಪ್ರಾಪಂಚಿಕ ವಾಸನೆಗಳನ್ನು ಧ್ವಂಸ ಮಾಡಿರಿ. ಒಳ್ಳೆಯ ಗುಣ-ಸ್ವಭಾವ, ನಡೆ-ನುಡಿಗಳನ್ನು ಬೆಳೆಸಿಕೊಳ್ಳಿರಿ. ನಿಮ್ಮ ಮಾನಸ ಸರೋವರದಿಂದ ಹೊರಬಂದಾಗ ಅದರ ನೀರು (ವೃತ್ತಿಗಳು) ವಿಷವಾಗದಿರುವಂತೆ ಅಚಲವಾದ ನಿರ್ಧಾರಗಳನ್ನೂ ದೃಢಸಂಕಲ್ಪಗಳನ್ನೂ, ಗಂಭೀರ ಪ್ರತಿಜ್ಞೆಗಳನ್ನೂ ಕೈಗೊಳ್ಳಿರಿ. ನಿಮ್ಮ ಮಾನಸ ಸರೋವರದಿಂದ ಪರಮ ಪರಿಶುದ್ಧವೂ ನವನವೀನವೂ, ದಿವ್ಯವೂ ಆದ ಭಾವನೆಗಳೂ ವಿಚಾರಗಳೂ ಹರಿದು ಬರಬೇಕು. ಇನ್ನೊಬ್ಬರಿಗೆ ಕೆಡುಕನ್ನು ಆಲೋಚಿಸುವದೂ ಅಸಾಧ್ಯವಾಗುವಂತೆ ನಿಮ್ಮ ಒಳಗಿನಿಂದ ಅಮೃತವೇ ಹರಿದು ಬರಬೇಕು. ನೀವು ಪರಿಶುದ್ಧರಾಗಬೇಕೆಂಬುದೇ ದೈವೀನಿಯಮ.

# ಸಾಧಕರಿಗೆ ಸೂಚನೆಗಳು

**ಶ್ರೀಶ್ರೀಗಳು**

೧. ಎಂಥ ಪಾಪಿಗೂ ಉದ್ಧಾರವಾಗುವುದಕ್ಕೆ ಮಾರ್ಗವಿದೆ. ವಾಲ್ಮೀಕಿಯಂಥ ಋಷಿಯೂ ಒಂದು ಕಾಲದಲ್ಲಿ ಪರಮಪಾತಕಿಯಾಗಿದ್ದನು. ಆದ್ದರಿಂದ ನೀವು ಮಾಡಿರಬಹುದಾದ ಪಾಪಗಳ ನಿಮಿತ್ತದಿಂದ ನಿರಾಶರಾಗಬೇಡಿರಿ. ಆದರೆ ಇನ್ನು ಮುಂದೆ ಪಾಪವನ್ನು ಮಾಡುವದಿಲ್ಲವೆಂದು ಮನಃಪೂರ್ವಕವಾಗಿ ಸಂಕಲ್ಪಮಾಡಿರಿ; ಸಾಧುಮಾರ್ಗಕ್ಕೆ ಕೊಂಡೊಯ್ಯಬೇಕೆಂದು ಭಗವಂತನಲ್ಲಿ ಮೊರೆಯಿಡಿರಿ. ಆಮೇಲೆ ಯಾವ ಅಂಜಿಕೆಯೂ ಇರುವದಿಲ್ಲ.

೨. ಹೆರರ ಕುಂದುಕೊರತೆಗಳನ್ನು ಎಂದಿಗೂ ಎತ್ತೆಣಿಸಬಾರದು. ಮತ್ತೊಬ್ಬರಲ್ಲಿ ಕಾಣಬಹುದಾದ ದೋಷಗಳಿಗೆ ಕುರುಡರಾಗಿರಬೇಕು. ತಪ್ಪನ್ನು ಬಣ್ಣಿಸುವ ಚಾಡಿಯ ಮಾತಿಗೆ ಕಿವುಡರಾಗಿರಬೇಕು. ಹುಳುಕನ್ನು ಕುರಿತ ಮಾತಿಗೆ ಮೂಕನಾಗಿರಬೇಕು. ಕಲಂಕವನ್ನು ಕುರಿತ ಯೋಚನೆಗೆ ಮಂಕರಾಗಿರಬೇಕು. ನಿಮ್ಮ ಮನೆಯು ಕುಸಿದು ಬೀಳುತ್ತಿರುವಲ್ಲಿ ಮತ್ತೊಬ್ಬರ ಮನೆಯನ್ನು ಸರಿಪಡಿಸುವ ಗುತ್ತಿಗೆ ಹಿಡಿಯುವದು ಎಂದಿಗೂ ತರವಲ್ಲ.

೩. ಒಬ್ಬರ ಬಡತನದ ಮುಂದೆ ತನ್ನ ಸಿರಿತನವನ್ನು ಮೆರೆಯಿಸಬಾರದು; ಬಡವರಿಗೆ ಬಂಧುವಾಗಬೇಕು. ಒಬ್ಬರು ಸಂಕಟದಲ್ಲಿರುವಾಗ ಸುಖಜೀವನದ ಸೊಂಪನ್ನು ತೋರಿಸಿಕೊಳ್ಳಬಾರದು; ಅವರ ಸಂಕಟದಲ್ಲಿ ಅನುತಾಪವಿರಬೇಕು. ತಿಟ್ಟಿನ ನೀರು ತಗ್ಗಿಗೆ ಹರಿಯುವದು ಸಹಜವಲ್ಲವೆ? ಮತ್ತೊಬ್ಬರ ಗುಣಗಳನ್ನು ಕಂಡು ಕರುಬಬಾರದು. ಅನುಕರಿಸಬೇಕು. ಮತ್ತೊಬ್ಬರ ಏಳಿಗೆಯನ್ನು ಕಂಡು ಹೊಟ್ಟೆಯನ್ನು ಕಿವಿಚಿಕೊಳ್ಳಬಾರದು; ಹಿಗ್ಗಬೇಕು. ಪಕ್ಕದಲ್ಲಿಯೇ ಅಮೃತದ ಝುರಿಯಿರುವಾಗ ಬರಿಯ ಗಡಿಗೆಯನ್ನು ಕಂಕುಳಲ್ಲಿ ಅವಿಚಿಕೊಂಡಿರುವದೆ?

೪. ನಡೆದಷ್ಟೂ ದಾರಿ ಸಾಗುವದು; ಆದ್ದರಿಂದ ಸುಮ್ಮನೆ ಕೂರಬಾರದು. ಸೋಮಾರಿತನವೇ ಪಾಪಕ್ಕೆ ತವರುಮನೆ. ನಿಮಗೂ ಅನ್ಯರಿಗೂ ಉಪಯೋಗವಾಗುವ ಎಷ್ಟೋ ಕೆಲಸಗಳಿವೆ. ನಿಮ್ಮ ಮನಸ್ಸಿಗೆ ಒಗ್ಗುವ ಯಾವದಾದರೊಂದು ಕೆಲಸವನ್ನು ಕೂಡಲೆ ಕೈಕೊಳ್ಳಿರಿ. ಅದು ಸಲೀಸಾಗಿ ಸಾಗುವಂತೆಯೂ ಸಫಲವಾಗುವಂತೆಯೂ ಅನುಗ್ರಹಿಸೆಂದು ಭಗವಂತನನ್ನು ಬೇಡಿಕೊಳ್ಳಿರಿ.

೫. ಮೊದಮೊದಲು ಸಾಧುಸಂತರ ನಡೆನುಡಿಗಳೇ ನಿಮಗೆ ಮಾದರಿಯಾಗಿರಲಿ. ಅವರ ಸೇವೆಯನ್ನು ಭಕ್ತಿಯಿಂದ ಮಾಡುತ್ತಿದ್ದರೆ, ಅವರ ಉಪದೇಶವನ್ನು ಆದರದಿಂದ ಕೇಳುತ್ತಿದ್ದರೆ, ಕಾಲಕ್ರಮದಲ್ಲಿ ನಿಮ್ಮ ಸ್ವಂತಮಾರ್ಗವು ಯಾವದೆಂಬುದನ್ನು ಪರಮೇಶ್ವರನು ನಿಮಗೆ ತೋರಿಸಿಕೊಡುವನು.

೬. ಪರಮಾತ್ಮನು ಸರ್ವಭೂತಗಳಿಗೂ ಆತ್ಮನು; ಆದ್ದರಿಂದ ಆತನು ನಿಮಗೂ ಆತ್ಮನಾಗಿರುತ್ತಾನೆಂಬುದನ್ನು ಮನಸ್ಸಿಗೆ ತಂದುಕೊಳ್ಳಿರಿ. ಪರಮಾತ್ಮನ ಧರ್ಮಗಳೆಲ್ಲವೂ ನಿಮ್ಮಲ್ಲಿ ಈಗಲೂ ಇವೆ. ಅವು ಅವ್ಯಕ್ತವಾಗಿರಬಹುದು; ಆದರೆ ತಕ್ಕ ಸಾಧನಗಳಿಂದ ಅವನ್ನು ಹೊರತೋರುವಂತೆ ಮಾಡಿಕೊಳ್ಳುವದು ಅಸಾಧ್ಯವಲ್ಲ. ಕೊಳೆತ ಚಂದನದ ಚಕ್ಕೆಯಾದರೇನು? ಸಾಣೆಯಕಲ್ಲಿನ ಮೇಲೆ ಅರೆದರೆ ಸುಗಂಧವನ್ನು ಬೀರದೆ ಇರುವದೆ?

೭. ಧರ್ಮಬಾಹಿರನೆಂದು, ಅಥವಾ ಪರಧರ್ಮದವನೆಂದು, ಯಾರನ್ನೂ ಕಡೆಗಣಿಸಬೇಡಿ, ದೂರಬೇಡಿ. ವಾದದಲ್ಲಿ ಸೋಲಿಸುವುದಕ್ಕೆ ಯತ್ನಿಸಬೇಡಿ, ಮನನೋಯಿಸುವದಕ್ಕಂತೂ ಹೋಗಲೇಬೇಡಿ. ದೇವರಿಗೆ ಎಲ್ಲರೂ ಮಕ್ಕಳೇ; ಅವನಿಗೆ ಯಾವ ಮಕ್ಕಳ ಮೇಲೆ ತಾನೆ ಪ್ರೀತಿಯಿಲ್ಲ? ಯಾರನ್ನು ಕಂಡರೂ ಸಂತೋಷವನ್ನುಂಟುಮಾಡುವದೇ ಈಶ್ವರಪೂಜೆಯು.

೮. ಹರಿಯುವ ನೀರು ಪಾಚಿಗಟ್ಟುವದಿಲ್ಲ; ಸುತ್ತುಮುತ್ತಲಿನ ಜನರನ್ನು ಪ್ರೀತಿಸುತ್ತಿದ್ದರೆ ಅಂತಃಕರಣವು ಅಶುದ್ಧವಾಗುವದಿಲ್ಲ. ಎಲ್ಲರಲ್ಲಿಯೂ ಇರುವ ಪರಮಾತ್ಮನ ಪ್ರೇಮಕ್ಕೆ ಬೇಲಿಹಾಕಿಕೊಂಡು ನನ್ನ ಹೃದಯದ ಹೊಲದಲ್ಲಿಯೇ ಅದನ್ನು ಬೆಳೆಯಿಸಿಕೊಳ್ಳುವೆನೆನ್ನುವದು ಎಂಥ ತಿಳಿಗೇಡಿತನ!

೯. ಯಾವಾಗಲೂ ಉಲ್ಲಾಸದಿಂದಿರಬೇಕು; ಎಂದಿಗೂ ಮುಖವನ್ನು ಜೋಲು ಹಾಕಿಕೊಳ್ಳಬಾರದು, ಸಿಂಡ್ರಿಸಿಕೊಳ್ಳಬಾರದು. ನಿಮ್ಮ ಮುಖದಲ್ಲಿ ಸೂಸುವ ಸುಮ್ಮಾನವೇ ಹತ್ತಿರಕ್ಕೆ ಬಂದವರಿಗೆಲ್ಲ ಸನ್ಮಾನವಾಗುವದು. ಮಲ್ಲಿಗೆಯು ಅರಳುವದಕ್ಕೆ ಮೊದಲಾದರೆ ಎತ್ತ ಕಡೆಗೆ ತಾನೆ ಅದರ ತನಿಗಂಪು ತಾಕದೆ ಇರುತ್ತದೆ?

೧೦. ನೆಟ್ಟಗೆ ಹರಿಯಲಿ, ಡೊಂಕಾಗಿ ಹರಿಯಲಿ, ಪೂರ್ವಕ್ಕೆ, ಪಶ್ಚಿಮಕ್ಕೆ, ದಕ್ಷಿಣಕ್ಕೆ, ಉತ್ತರಕ್ಕೆ—ಯಾವ ದಿಕ್ಕಿಗೆ ಹರಿದರೂ ಎಲ್ಲಾ ನದಿಗಳೂ ಒಂದಲ್ಲದಿದ್ದರೆ ಒಂದು ದಿನ ಸಮುದ್ರವನ್ನೇ ಸೇರುವವು. ಭಗವಂತನನ್ನು ಸೇರುವದಕ್ಕೆ ಈ ಮಾರ್ಗವನ್ನೇ ಅನುಸರಿಸಬೇಕೆಂದು ಯಾರೊಬ್ಬರನ್ನೂ ಬಲಾತ್ಕರಿಸುವದಕ್ಕೆ ಹೋಗಬೇಡಿರಿ. ನಿಮ್ಮ ಮಾರ್ಗದಲ್ಲಿ ನಿಮ್ಮ ಭಕ್ತಿಯು ಹರಿಯುತ್ತಿರಲಿ; ಅಷ್ಟರಿಂದಲೇ ಮಿಕ್ಕವರಿಗೂ ದಾರಿಯನ್ನು ತೋರಿಸಿದಂತೆ ಆಗುತ್ತದೆ.

೧೧. ಅಧ್ಯಾತ್ಮಸಾಧನವು ಹೃದಯಕ್ಕೆ ಸಂಬಂಧಪಟ್ಟದ್ದು. ಹೃದಯವನ್ನು ಹರಿಗೊಪ್ಪಿಸುವದೇ ಸಾಧನದ ಮರ್ಮವು. ನೀವು ಮಾಡುವ ಕರ್ಮ, ಆಡುವ ಮಾತು, ಮನದಂದುಕೊಳ್ಳುವ ಭಾವನೆ—ಎಲ್ಲವೂ ಹೃತ್ಪೂರ್ವಕವಾಗಿ ಭಗವಂತನಿಗೆ ಅರ್ಪಿತವಾಗಿದ್ದರೆ, ನಿಮ್ಮ ಹೃದಯದಲ್ಲಿ ಭಗವಂತನಿಗೆ ಹೊರತು ಮತ್ತೆ ಏತಕ್ಕೂ ಎಡೆಯಿಲ್ಲದೆ ಇದ್ದರೆ, ನಿಮ್ಮ ಸಾಧನವು ಪೂರ್ಣವಾಯಿತು; ನೀವು ಸಿದ್ಧರಾದಿರಿ.

# ಕೆ. ಜಿ. ಸುಬ್ರಾಯಶರ್ಮರ ಸಾತ್ತ್ವಿಕ ಸಾಹಸ!

**ಪ್ರೊ॥ ಸಾ. ಕೃ. ರಾಮಚಂದ್ರರಾವ್**

೩೦೫, ೬ನೇ ಕ್ರಾಸ್, ೧ನೇ ಬ್ಲಾಕ್, ಜಯನಗರ, ಬೆಂಗಳೂರು-೧೧. ✆ ೨೬೬೩೧೯೫೭

'ವೇದಾಂತ ಸಂವತ್ಸರ', ಇದೊಂದು ಸಾತ್ತ್ವಿಕ ಸಾಹಸ; ಅಭೂತ ಪೂರ್ವವಾದದ್ದೂ ಹೌದು. ಅದ್ವೈತವೇದಾಂತವನ್ನು ಕುರಿತ ಹೊಸನಮೂನೆಯ ಈ ಪುಸ್ತಕವು ಹನ್ನೆರಡು ಸಾವಿರ ಪ್ರತಿಗಳಷ್ಟು ಮುದ್ರಣಗೊಳ್ಳುತ್ತಿದೆ ಎಂಬುದೇ ಪರಮ ಆಶ್ಚರ್ಯದ ಸಂಗತಿ. ಅಷ್ಟೂ ಪ್ರತಿಗಳು ಮುದ್ರಣಕ್ಕೆ ಮೊದಲೇ, ಪ್ರಕಾಶನಕ್ಕೆ ಮೊದಲೇ, ವಾಚಕರಿಂದ ಕಾದಿರಿಸಲ್ಪಟ್ಟಿವೆ ಎಂಬುದಂತೂ ಇನ್ನಷ್ಟು ಸೋಜಿಗದ ವಿಚಾರ. ವೇದಾಂತವು ಯಾವಾಗ ತಾನೆ ಇಷ್ಟು ಜನಪ್ರಿಯವಾಗಿದ್ದಿತು? ನಮ್ಮ ಸುಬ್ರಾಯಶರ್ಮರಿಂದ ಸಿದ್ಧಗೊಳಿಸಲ್ಪಟ್ಟ ಈ ಗ್ರಂಥವು ಭಾನುವಾರ 29-8-2004 ರಂದು ಬೆಂಗಳೂರಿನ ಬಸವನಗುಡಿ ಬಡಾವಣೆಯಲ್ಲಿರುವ ರಾಮಕೃಷ್ಣ ಮಠದಲ್ಲಿ ಪೂಜ್ಯ ಸ್ವಾಮಿ ಹರ್ಷಾನಂದರಿಂದ ಲೋಕಾರ್ಪಣೆಯಾಯಿತು.

ಅಧ್ಯಾತ್ಮಪ್ರಕಾಶ ಕಾರ್ಯಾಲಯವು ಬ್ರಹ್ಮೀಭೂತರಾದ, ಕನ್ನಡನಾಡಿನ ಶ್ರೀ ಶಂಕರಾಚಾರ್ಯರೆಂದೇ ಪ್ರಸಿದ್ಧರಾದ ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀ ಸ್ವಾಮಿಗಳ ಕೊಡುಗೆ. ಶುದ್ಧಶಾಂಕರ ಸಿದ್ಧಾಂತದ ಸಮರ್ಥನೆಗಾಗಿ ಅವರು ಈ ಸಂಸ್ಥೆಯನ್ನು ಹುಟ್ಟುಹಾಕಿ ಅದರ ಮೂಲಕವಾಗಿ ನೂರಾರು ಗ್ರಂಥಗಳನ್ನು ಕನ್ನಡ, ಸಂಸ್ಕೃತ, ಆಂಗ್ಲಭಾಷೆಗಳಲ್ಲಿ ಹೊರತಂದು ವೇದಾಂತದ ಪ್ರಚಾರ ಮಾಡಿದ್ದು ಎಲ್ಲರಿಗೂ ತಿಳಿದೇ ಇದೆ. 'ಆ ಸುಪ್ತೇರಾ ಮೃತೇಃ ಕಾಲಂ ನಯೇದ್ವೇದಾಂತಚಿಂತಯಾ' ಎಂಬ ಮಾತಿದೆ. ಎಂದರೆ ಹಗಲು ಎಚ್ಚರಗೊಂಡಾಗಿನಿಂದ ಮಲಗುವವರೆಗೆ, ಬದುಕಿನಲ್ಲಿ ಸಾವು ಬಂದೊದಗುವ ತನಕ ಅಧ್ಯಾತ್ಮಚಿಂತನೆಯಲ್ಲೇ ಕಾಲ ಕಳೆಯಬೇಕು. ಈ ಮಾತನ್ನು ತಮ್ಮ ಬಾಳಿನುದ್ದಕ್ಕೂ ನಡೆಸಿದವರು ಈ ಸ್ವಾಮಿಗಳು.

ಇಂಥ ಸ್ವಾಮಿಗಳಲ್ಲಿ ಸುಬ್ರಾಯಶರ್ಮರು ತಮ್ಮ ಹತ್ತನೆಯ ವಯಸ್ಸಿನಲ್ಲೇ ಶಿಷ್ಯವೃತ್ತಿಯನ್ನಾರಂಭಿಸಿ ಹದಿನಾರು ವರ್ಷಗಳು (೧೯೫೯-೧೯೭೫) ಎಡೆಬಿಡದೆ ಗುರುಸೇವೆಯನ್ನು ಮಾಡಿ ವೇದಾಂತಗ್ರಂಥಗಳ ಅಧ್ಯಯನ ಮಾಡಿದರು. ಗುರುಗಳು ವೇದಾಂತದ ರಹಸ್ಯಗಳನ್ನೆಲ್ಲ ಅವರಿಗೆ ಪ್ರೀತಿಯಿಂದ ತಿಳಿಯಪಡಿಸಿ ಅನುಗ್ರಹ ಮಾಡಿದರು. ತಮ್ಮ ಗುರುವಿನ ಬಗ್ಗೆ ಶರ್ಮರಿಗೆ ಇರುವ ಶ್ರದ್ಧೆ, ನಿಷ್ಠೆ, ಭಕ್ತಿ ಇವು ಅನ್ಯಾದೃಶವಾದುವು. ತಮ್ಮ ಸ್ವಂತ ಅಧ್ಯಯನ, ಶ್ರಮ, ಪ್ರಯತ್ನಗಳಿಂದ ಸುಬ್ರಾಯಶರ್ಮರು ಗಳಿಸಿಕೊಂಡಿರುವ 'ಅಘಟಿತಘಟನಾಪಟೀಯಸಿ' ಯಾದ ಸಾಮರ್ಥ್ಯವು ಈಗ ಲೋಕೋತ್ತರವೆಂಬಂತೆ ಮೆರೆಯುತ್ತಿರುವುದು ಗುರುಕೃಪೆಯ ಮಹಿಮೆಯಿಂದಲೇ ಎಂದು ಅವರು ನಂಬಿದ್ದಾರೆ. ತಮ್ಮೆಲ್ಲ ಸಾಹಸ-ಸಿದ್ಧಿಗಳಿಗೂ ಆ ಗುರುಗಳ ಆಶೀರ್ವಾದವೇ ಬೆನ್ನೆಲುಬು ಎಂದು ದೃಢವಾಗಿ ನಂಬಿರುವುದರಿಂದಲೇ ಅವರಲ್ಲಿ ವಿನಯ, ಸರಳತೆ, ಸಜ್ಜನಿಕೆಗಳು ಮನೆಮಾಡಿಕೊಂಡಿವೆ. ಗುರುಕಾರುಣ್ಯವು ಏನನ್ನು ತಾನೆ ಮಾಡಲಾರದು?

ಶಾಸ್ತ್ರವೈದುಷ್ಯ ಒಂದು ಕಡೆ, ವ್ಯಕ್ತಿತ್ವದ ಸೊಬಗು ಒಂದು ಕಡೆ; ಸೋಲನ್ನರಿಯದ ಕಾಯಕ ಒಂದು ಕಡೆ, ದಣಿವು ಕಾಣದ ಉದ್ಯಮಶೀಲತೆ ಇನ್ನೊಂದು ಕಡೆ. ತಮ್ಮ ಪಾಲಿಗೆ ಗುರುಗಳ ಕೃಪೆಯಿಂದಲೇ ಬಂದ ಬೆಂಗಳೂರು ಅಧ್ಯಾತ್ಮಪ್ರಕಾಶಕಾರ್ಯಾಲಯವನ್ನು ಎತ್ತಿನಿಲ್ಲಿಸಿದರು; ತಮ್ಮ ನಿರಂತರ ಪ್ರವಚನ ಗಳಿಂದ ಈ ಆಶ್ರಮವನ್ನು ಜನಪ್ರಿಯವನ್ನಾಗಿಸಿದರು. ಬಹುಜನರಿಗೆ ಒಗ್ಗಲಾರದ ವೇದಾಂತದ ಪ್ರಚಾರಕ್ಕೇ ಮೀಸಲಾದ ಒಂದು ಸಂಸ್ಥೆ ಹೀಗೆ ಜನರ ವಿಶೇಷ ಒಲುಮೆಗೆ ಕಾರಣವಾದುದು ಸುಬ್ರಾಯಶರ್ಮರ **ಮೊದಲ ಸಾಹಸ**. ಅದರ ಬೆನ್ನಿನಲ್ಲೇ **'ಶಂಕರಭಾಸ್ಕರ'** ಎಂಬ ತ್ರೈಮಾಸಿಕ ಪತ್ರಿಕೆಯನ್ನು ಹುಟ್ಟುಹಾಕಿ ದೇಶವಿದೇಶಗಳಲ್ಲೆಲ್ಲ ಅದನ್ನು ಅತಿಶಯವಾಗಿ ಮೆರೆಸಿದ್ದು **ಎರಡನೆಯ ಸಾಹಸ**. ಈ ವೇದಾಂತ ಪತ್ರಿಕೆಯು ಗಳಿಸಿಕೊಂಡಿರುವ ಯಶಸ್ಸು **ಪತ್ರಿಕೋದ್ಯಮದ ಪ್ರಪಂಚದಲ್ಲೇ** ಎಲ್ಲ ದಾಖಲೆಗಳನ್ನೂ ಮುರಿದು ಮುನ್ನುಗ್ಗಿತು. ಇದಕ್ಕೆ ಶರ್ಮರೊಬ್ಬರೇ **ಕಾರಣಪುರುಷರಾದವರು ಎಂದು ಬೇರೆ ಹೇಳಬೇಕಾಗಿಲ್ಲ, ಈ ದಿಶೆಯಲ್ಲಿ** ಏಕಾಂಗಿಯಾಗಿ ದುಡಿದವರು ಅವರು.

**ಮೂರನೆಯ ಸಾಹಸ, 'ಶಾಂಕರ ಸಂವತ್ಸರ'** ರೂಪದಲ್ಲಿ ಮೈದಳೆಯಿತು. ಶ್ರೀ ಶಂಕರಾಚಾರ್ಯರ ಉಪದೇಶವಾಕ್ಯಗಳನ್ನು ವರ್ಷದ ಒಂದೊಂದು ದಿನವೂ ಮನನ ಮಾಡಲನುಕೂಲವಾಗುವಂತೆ ಸಂಗ್ರಹಿಸಿ, ವಿವರಿಸಿ ಒಂದೆಡೆ ದಿನಚರಿ ಸೂಕ್ತಿಯಾಗಿ ಸಂಕಲನಮಾಡಿರುವ **ಅಪೂರ್ವ ಕೃತಿಯಿದು**. ಆಚಾರ್ಯರ ಪ್ರಸ್ಥಾನತ್ರಯಭಾಷ್ಯಗಳ ಪರಿಚಯವು ಸೂಕ್ಷ್ಮವಾಗಿ ಜನಸಾಮಾನ್ಯರಿಗೂ ಆಗಲು ನೆರವಾಗುವ ಕೃತಿಯಿದು. **ವೇದಾಂತದ ಪ್ರೌಢ ಸಂದೇಶವು ಇಷ್ಟು ಸರಳವಾಗಿ ಜನಮನವನ್ನು ಮುಟ್ಟುವ ಪ್ರಯತ್ನ ಬೇರೊಂದಿರದು. ಗುರುಗಳು ಹಾಕಿಕೊಟ್ಟ ದಾರಿಯಲ್ಲೇ ನಡೆದು ಶ್ರೀಶರ್ಮರು ಜಯವನ್ನು ಸಾಧಿಸಿದರು.**

ಅದೇ ಧಾಟಿಯಲ್ಲೇ ಈಗ ಹೊರಬಂದಿರುವ **'ವೇದಾಂತ ಸಂವತ್ಸರ'** ಶ್ರೀಶರ್ಮರ **ನಾಲ್ಕನೆಯ ಸಾಹಸ**. ವೇದಾಂತವೆಂದರೆ ವೇದವಾಙ್ಮಯದ ಕೊನೆಯ ಮತ್ತು ನಿರ್ಣಾಯಕವಾದ ಭಾಗ ಉಪನಿಷತ್ತುಗಳು. ಪ್ರಸ್ಥಾನತ್ರಯವೆಂಬ ಕಲ್ಪನೆ ಯಲ್ಲಿ ಆದ್ಯವಾದುದು ಉಪನಿಷತ್ತುಗಳೇ. ಉಪನಿಷತ್ತುಗಳ ಮೀಮಾಂಸೆಯಿರು ವುದು ಬಾದರಾಯಣ ಸೂತ್ರಗಳು ಎರಡನೆಯದು; ಉಪನಿಷತ್ತುಗಳ ಸಂಗ್ರಹ, ಸರಳ ನಿರೂಪಣೆ ಭಗವದ್ಗೀತೆಯು, ಮೂರನೆಯದು. ವೇದಾಂತಕ್ಕೆ ಉಪನಿಷತ್ತು ಗಳೇ ಆಸರೆ, ಆಕರ. ಶ್ರೀಶಂಕರಾಚಾರ್ಯರು ಹತ್ತು ಉಪನಿಷತ್ತುಗಳಿಗೆ ಭಾಷ್ಯವನ್ನು ರಚಿಸಿದ್ದಾರೆ. ಇನ್ನು ನಾಲ್ಕು ಉಪನಿಷತ್ತುಗಳನ್ನು ಪ್ರಮಾಣವಾಗಿ ಗ್ರಹಿಸಿದ್ದಾರೆ. **ಈ ಹದಿನಾಲ್ಕು ಉಪನಿಷತ್ತುಗಳಿಂದ ಶ್ರೀ ಸುಬ್ರಾಯಶರ್ಮರು ಮನನೀಯ ವಾಕ್ಯ ಗಳನ್ನು ಆರಿಸಿಕೊಂಡು ಈ "ವೇದಾಂತ ಸಂವತ್ಸರ"**ದಲ್ಲಿ ಸಂಕಲನಮಾಡಿದ್ದಾರೆ.

ಸಂಕಲನದ ಕ್ರಮ ಸ್ವಾರಸ್ಯವಾಗಿದೆ. ದಿನಕ್ಕೊಂದು ಉಪನಿಷದ್ವಾಕ್ಯವನ್ನು ಸೂಕ್ತಿಯನ್ನು ಪಾರಾಯಣದಂತೆ ಓದಿಕೊಳ್ಳುವಂತೆ, ಆಸಕ್ತಿಯಿದ್ದರೆ ದಿನವಿಡೀ ಅದರ

ಮನನ ಮಾಡುವಂತೆ, ವರ್ಷದ ೩೬೬ ದಿನಗಳಿಗೆ ಅಳವಡಿಸಿದ್ದಾರೆ. ವಾರದಲ್ಲಿ ಒಂದೊಂದು ದಿನವೂ ಹೀಗೆಯೇ ಒಂದು ಉಪನಿಷದ್ವಾಕ್ಯ, ಉಪನಿಷತ್‌ಸೂಕ್ತಿ. ಮೂಲಮಂತ್ರಗಳನ್ನು ಕನ್ನಡ ಲಿಪಿಯಲ್ಲೇ ಕೊಟ್ಟು, ಅವುಗಳಿಗೆ ಕನ್ನಡದಲ್ಲಿ ಸರಳವಾದ ವಿವರಣೆಯನ್ನೊದಗಿಸಿದ್ದಾರೆ. ಅದೇ ಕ್ರಮದಲ್ಲಿಯೇ ಹಿಂದೂ ಪದ್ಧತಿಯಲ್ಲಿನ ಹನ್ನೆರಡು ಮಾಸಗಳಿಗೂ ಒಂದೊಂದು ಉಪನಿಷದ್ವಾಕ್ಯವನ್ನು ಅಳವಡಿಸಿದ್ದಾರೆ. ಮುಂದೆ ವ್ಯವಹಾರದ ವರ್ಷದಲ್ಲಿ (ಜನವರಿ ೧ ರಿಂದ ಡಿಸೆಂಬರ್ ೩೧ರ ವರೆಗೂ) ಪ್ರತಿತಿಂಗಳ ಪ್ರತಿದಿನವೂ ಒಂದೊಂದು ಉಪನಿಷದ್ವಾಕ್ಯವನ್ನು ಎತ್ತಿ ತೋರಿಸುತ್ತದೆ. ಹೀಗೆ ಒಟ್ಟು ೩೮೪ ಉಪನಿಷದ್ವಾಕ್ಯಗಳು ಇಲ್ಲಿ ಅಡಕವಾಗಿವೆ. ಒಂದೊಂದೂ ವಿಶಿಷ್ಟವಾದ ಒಂದು ಸಂದೇಶವನ್ನು ಹೊತ್ತು ಓದುಗರಿಗೆ ಮುಟ್ಟಿಸುತ್ತದೆ.

ಹೀಗೆ ದಿನಕ್ಕೊಂದು ಉಪನಿಷತ್ತಿನ ಸಂದೇಶವನ್ನು ತಿಳಿಗನ್ನಡದಲ್ಲಿ ಕೊಟ್ಟಿರುವುದಲ್ಲದೆ, ಪುಟದ ಮೇಲ್ಭಾಗದಲ್ಲಿ ಲೇಖಕರದ್ದೇ ಆದ ವೇದಾಂತಭಾಸ್ಕರ ಮಂತ್ರದ ಒಂದು ಸಾಲನ್ನು ಓಂಕಾರದಿಂದ ಆರಂಭಿಸಿ ನಮೋವಾಕದಲ್ಲಿ ಮುಗಿಸಿ ಕಾಣಿಸಿದ್ದಾರೆ. ಇದನ್ನು ಜಪಕ್ಕೋ, ಪಾರಾಯಣಕ್ಕೋ, ಬಳಸಿಕೊಳ್ಳಬಹುದು. ಅದರ ಅಡಿಯಲ್ಲಿ ಒಂದು ಅನುಷ್ಟುಪ್ ಶ್ಲೋಕವನ್ನು ಅವರೇ ರಚಿಸಿ, ಆ ದಿನದ ಉಪನಿಷದ್ವಾಕ್ಯದ ಸಂದೇಶವನ್ನು ಸಂಗ್ರಹವಾಗಿ ನಿರೂಪಿಸಿದ್ದಾರೆ. ಅದರ ಕನ್ನಡಾನುವಾದವನ್ನೂ ಕೊಟ್ಟಿದ್ದಾರೆ. ಹೀಗೆ ಒಂದೊಂದು ದಿನವೂ ಒಂದೊಂದು "ವೇದಾಂತ ಭಾಸ್ಕರ" ನಾಮಾವಳಿ, ಸಂಸ್ಕೃತದಲ್ಲಿ ಸಂಗ್ರಹಶ್ಲೋಕ, ಉಪನಿಷದ್ವಾಕ್ಯ, ಕನ್ನಡ ವಿವರಣೆ ಇಷ್ಟು ವಿವರಗಳು ಒಟ್ಟಿಗೇ ಕಾಣಸಿಗುತ್ತವೆ.

ಆಸಕ್ತರು ದಿನವೂ ಬಿಡುವಾದಾಗ ಹತ್ತುನಿಮಿಷಗಳಷ್ಟೇ ಕಾಲದಲ್ಲಿ ಒಂದೊಂದು ಪುಟವನ್ನು ಅಧ್ಯಯನ ಮಾಡಬಹುದು. ವೇದಾಂತಭಾಸ್ಕರ ನಾಮಾವಳಿಯನ್ನು ಗಟ್ಟಿಮಾಡಿಕೊಳ್ಳಬಹುದು. ಉಪನಿಷದ್ವಾಕ್ಯವನ್ನು ಓದಿ, ಮನನ ಮಾಡಬಹುದು. ವರ್ಷದ ಕೊನೆಯಲ್ಲಿ ಹದಿನಾಲ್ಕು ಉಪನಿಷತ್ತುಗಳ ಪರಿಚಯ ಚೆನ್ನಾಗಿಯೇ ಆಗುತ್ತದೆ. ಸಮಗ್ರ ಉಪನಿಷದ್ ವಾಙ್ಮಯದ ಧೋರಣೆ ಹೆಚ್ಚು ಶ್ರಮವಿಲ್ಲದೆ ಮನದಟ್ಟಾಗುತ್ತಿದೆ. ಈ ಪುಸ್ತಕವೇ ಒಬ್ಬ ಗುರುವಿನ ಸ್ಥಾನದಲ್ಲಿ ಇರುತ್ತದೆ. ರುಚಿಸಿದ ಸಂದೇಶವನ್ನು ಮತ್ತೆ ಮತ್ತೆ ಅನುಸಂಧಾನಮಾಡುವ ಅವಕಾಶವೂ ಇರುತ್ತದೆ. ಸಂಶಯಗಳಿದ್ದರೆ ಅವುಗಳ ನಿವಾರಣೆಗೂ ನೆರವಾಗುತ್ತದೆ. ಉಪನಿಷತ್ತುಗಳೆಂದರೆ ಸಾಮಾನ್ಯಜನರಿಗೆ ಇರುವ ಅಂಜಿಕೆ ಈ ಪುಸ್ತಕದಿಂದ ಮರೆಯಾಗುತ್ತದೆ. ಆಯಾ ದಿನದ ಉಪನಿಷದ್ವಾಕ್ಯದ ಸಂದೇಶವನ್ನು ಕನ್ನಡದಲ್ಲಿ ದಪ್ಪ ಅಕ್ಷರಗಳಲ್ಲಿ ತಲೆಬರಹದ ರೀತಿಯಲ್ಲಿ ಕೊಟ್ಟಿರುವುದಂತೂ ಯಾರಿಗಾದರೂ ಪ್ರಬೋಧಕವಾಗಿದೆ. ಸಂದೇಶದ ತಿರುಳನ್ನು ಶರ್ಮರು ಸರಳವಾಗಿ ಹಿಡಿದಿಟ್ಟಿದ್ದಾರೆ.

ಈ ಅಪೂರ್ವ ದೈನಂದಿನಿಯ ಕಡೆಯಲ್ಲಿ ವೇದಾಂತದ ಹತ್ತು ಪ್ರಧಾನ ಸಂದೇಶಗಳನ್ನು ಪಟ್ಟಿಮಾಡಿಕೊಟ್ಟಿದ್ದಾರೆ. ಇದರ ತಲೆಯಭಾಗದಲ್ಲಿ 'ಓಂ ವೇದಾಂತಭಾಸ್ಕರಾಯ ನಮಃ' ಎಂಬ ಮಂತ್ರವೂ ಇದೆ. ೩೬೬ ದಿನಗಳಲ್ಲಿ

ಪ್ರಧಾನ ಉಪನಿಷತ್ತುಗಳ ಸಂದೇಶವು ಹೀಗೆ ಇಲ್ಲಿ ಒಂದೆಡೆ, ದೊರಕುತ್ತದೆ. ಲೇಖಕರು ವಾದ-ವಿವಾದ, ಖಂಡನ-ಮಂಡನ, ತರ್ಕ-ವಿತರ್ಕ ಯಾವುದಕ್ಕೂ ಅವಕಾಶಕೊಡದೆ ಇರುವುದೊಂದು ವಿಶೇಷ ಈ ಪುಸ್ತಕದ್ದು. ವಿವರಣೆಯಿಂದ ಸರಳವಾದ ಅರಿವು ಮೂಡುತ್ತದೆ, ಅಷ್ಟೆ; ಅದರ ಚೌಕಟ್ಟು **ಅವರ ಗುರುಗಳೇ ಕಾಣಿಸಿದ ಸರ್ವಸಮ್ಮತವಾದ ಉಪನಿಷದ್ ಉಪದೇಶಗಳು.** ಮಹನೀಯರಾದ ಅವರ ಗುರುಗಳ ಕೈಂಕರ್ಯವೂ ಇದೇ ಆಗಿದ್ದಿತು. ಅವರ ಆಶಯವನ್ನು ಇವರು ಚೆನ್ನಾಗಿ ಗ್ರಹಿಸಿರುವುದು ಇಲ್ಲಿ ಸ್ಪಷ್ಟವಾಗುತ್ತದೆ. **'ಗುರುಂ ಪ್ರಕಾಶಯೇದ್ ಧೀಮಾನ್'** ಎಂಬ ಮಾತು ಶ್ರೀಶರ್ಮರ ವಿಷಯಕ್ಕೆ ಇಲ್ಲಿ ಸಾರ್ಥಕವಾಗಿದೆ.

ಗ್ರಂಥದ ಸಿದ್ಧತೆಯಲ್ಲಿ ಶ್ರೀ ಸುಬ್ರಾಯಶರ್ಮರು ಅತ್ಯಂತ ಎಚ್ಚರಿಕೆಯಿಂದ ಅಚ್ಚುಕಟ್ಟನ್ನು ಕಾಣಿಸಿದ್ದಾರೆ. ಅಂತರಂಗದ ತಲೆಬರಹಗಳೋ, ಗ್ರಂಥದ ವೈಶಿಷ್ಟ್ಯವನ್ನು ತಿಳಿಯಹೇಳುವ ಪರಿಶಿಷ್ಟವೋ, ಹದಿನಾಲ್ಕು ಉಪನಿಷತ್ತುಗಳ ಶಾಂತಿ ಮಂತ್ರಗಳೋ, ಅನುಕ್ರಮಣಿಕೆಗಳೋ ಎಲ್ಲವೂ ಸೊಗಸಾಗಿವೆ. ಆಸ್ಥೆ, ನಿಷ್ಠೆ ಗಳಿಂದಾಗಿ ಇಡೀ ಪುಸ್ತಕದಲ್ಲಿ ಒಂದಾದರೂ ಮುದ್ರಣ ದೋಷವಿಲ್ಲವಾಗಿದೆ.

ಅಂತೂ ಶ್ರೀ ಸುಬ್ರಾಯಶರ್ಮರಿಗೆ ತಮ್ಮ ಸ್ವಭಾವಸಿದ್ಧವಾದ ತೆರೆದ, ಸರಳ ಮನಸ್ಸು ಮತ್ತು ಸಮರ್ಥ ಸದ್ಗುರುವಿನ ಒಡನಾಟದಿಂದ ಒಡಮೂಡಿದ ಸಂಸ್ಕಾರ, ಸತತ ಉದ್ಯಮಶೀಲತೆಯಿಂದ ಪಡೆದುಕೊಂಡ ಪ್ರೌಢಿಮೆ ಇವೆಲ್ಲ ಕೂಡಿಕೊಂಡು ಸಮರ್ಥವಾದ ವ್ಯಕ್ತಿತ್ವವೊಂದು ಸಿದ್ಧವಾಗಿದೆ. ಗುರುಗಳು ಕೈಗೊಂಡ ಕೆಲಸವನ್ನು ಮುಂದುವರಿಸಲು ಶ್ರೀ ಶರ್ಮರು ಸೊಂಟಕಟ್ಟಿ, ಪಟ್ಟುಹಿಡಿದು ದುಡಿಯುತ್ತಿದ್ದಾರೆ. ಪ್ರಸ್ತುತ **'ವೇದಾಂತ ಸಂವತ್ಸರ'**ವೂ ಈ ದುಡಿಮೆಯ ಒಂದು ಅಭಿವ್ಯಕ್ತಿಯೇ, ಅವರ ಸಾಮರ್ಥ್ಯದ ಒಂದು ನಿದರ್ಶನವೇ. ವೇದಾಂತವನ್ನು ಸಾಮಾನ್ಯ ಜನರಿಗೆ, ಅವರ ನೆಲೆಯಲ್ಲೇ ನಿಲುವಿನಲ್ಲೇ ಅವರಿಗೆ ನಿಲುಕುವಂತೆಯೇ, ಮುಟ್ಟಿಸುವುದು ತುಂಬ ಕಷ್ಟದ ಕೆಲಸ. ಆದರೆ ಅದರ ಅಗತ್ಯವನ್ನು ಮನಗಂಡು ಅದನ್ನು ಕೈಗೂಡಿಸುವ ಪ್ರಯತ್ನವನ್ನು ಶ್ರೀ ಶರ್ಮರು ಇಲ್ಲಿ ಮಾಡಿ ಯಶಸ್ವಿಯಾಗಿದ್ದಾರೆ. ಉದ್ದೇಶಸಾಧನೆ ಮುಖ್ಯ; ವ್ಯಕ್ತಿಯು ನಿಮಿತ್ತಮಾತ್ರ. ಆದರೆ ನಿಮಿತ್ತವನ್ನು ಆಯ್ದುಕೊಂಡಿರುವುದು ದೈವವೇ. ಶ್ರೀ ಸುಬ್ರಾಯಶರ್ಮರ ವ್ಯಕ್ತಿತ್ವದ ಸ್ವಾರಸ್ಯವಿರುವುದು ಇಲ್ಲಿ.

**"ವೇದಾಂತ ಸಂವತ್ಸರ"**; ದಿನಕ್ಕೊಂದು ಉಪನಿಷತ್ತಿನ ಸಂದೇಶ
(೩೬೫ ವೇದಾಂತಪವಿತ್ರಪಾವನಸಂದೇಶಸಾಗರ)

ಲೇಖಕರು : ವೇ॥ ಬ್ರ॥ ಶ್ರೀ ಕೆ. ಜಿ. ಸುಬ್ರಾಯಶರ್ಮಾ (Mobile: 98862 81622)

ಪ್ರಕಾಶಕರು : ಶ್ರೀ ನಿತ್ಯಾನಂದ ಪ್ರಿಂಟರ್ಸ್, ಅಶೋಕನಗರ
ಬೆಂಗಳೂರು 50. ದೂರವಾಣಿ : 26526027, 5767 0191

ಪುಟಗಳು : 452; Demy 1/8; Full Calico Bound; ಬೆಲೆ : ರೂ. 200/-

(ವಿಜಯ ಕರ್ನಾಟಕದಲ್ಲಿ ೨೯-೮-೨೦೦೪, ಭಾನುವಾರದಂದು ಪ್ರಕಟಿತ ಲೇಖನ.)

# ಪುಸ್ತಕಪರಿಚಯ: ವೇದಾಂತಾಸಕ್ತರಿಗೆ

## ಶ್ರೀಮದ್ಭಗವದ್ಗೀತೆ—(ಶಾಂಕರಭಾಷ್ಯ ಸಮೇತ)—ಶ್ರೀಶ್ರೀಗಳು

"ಭಗವದ್ಗೀತೆಯು ಸಾಧನಸಿದ್ಧಾಂತಗಳ ಸ್ವಾರಸ್ಯವನ್ನು ಸ್ಫುಟವಾಗಿ ತೋರಿಸಿ ಕೊಡುವ ಅಮೃತಪುಷ್ಕರಣಿಯಂತಿರುವ ಅಮೂಲ್ಯಗ್ರಂಥ. ಶ್ರೀಶಂಕರರ ಭಾಷ್ಯವು ಇದಕ್ಕೆ ಕಟ್ಟಿದ ಸ್ಫಟಿಕದ ಸೋಪಾನ. ಭಗವದ್ಗೀತೆಯಲ್ಲಿರುವ ಮೋಕ್ಷಸಾಧನವಾದ ಪರಮಾತ್ಮಜ್ಞಾನವು ಉಪಾಸನಾರೂಪವೆಂದು ಮಿಕ್ಕ ಆಚಾರ್ಯರ ಅಭಿಪ್ರಾಯ ವಾದರೆ, ಅದು ಉಪನಿಷತ್ತುಗಳಲ್ಲಿ ಪ್ರತಿಪಾದಿತವಾಗಿರುವ ಜ್ಞಾನದಂತೆ ವಸ್ತುತಂತ್ರ ವಾಗಿದೆ ಎಂದು ಶಂಕರರ ಮತ.

ಶಂಕರರ ಮತದಂತೆ ಜ್ಞಾನದಿಂದಲೇ ಮುಕ್ತಿ, ಇದು ಶರೀರವು ಬಿದ್ದುಹೋದ ಬಳಿಕ ಆಗುವದಲ್ಲ, ಜ್ಞಾನವಾದ ಕೂಡಲೇ ಬದುಕಿರುವಾಗಲೆ ದೊರಕತಕ್ಕದ್ದು, ಇದಕ್ಕೆ ಕರ್ಮದ ನೆರವೇನೂ ಬೇಕಿರುವದಿಲ್ಲ. 'ಸರ್ವಕರ್ಮಸಂನ್ಯಾಸಪೂರ್ವಕವಾದ ಜ್ಞಾನನಿಷ್ಠೆಯ ಸಂಪಾದನೆಯಿಂದ ಸಂಸಾರದ ಸಮೂಲ ನಾಶ.' ವರ್ಣಾಶ್ರಮ ಧರ್ಮರೂಪಿ ಕರ್ಮದಿಂದ ಅಭ್ಯುದಯ, ದೇವಾದಿಸ್ಥಾನ, ಆದರೆ ಈಶ್ವರಾರ್ಪಣ ಬುದ್ಧಿಯಿಂದ ಮಾಡಿದರೆ ಸತ್ತ್ವಶುದ್ಧ್ಯಾದಿಗಳ ಮೂಲಕ ಮುಕ್ತಿಗೆ ಪರಂಪರಾ ಸಾಧನವಾಗುತ್ತದೆ. ಕರ್ಮರೂಪವಾದ ಪ್ರವೃತ್ತಿಧರ್ಮ, ಜ್ಞಾನವೈರಾಗ್ಯರೂಪವಾದ ನಿವೃತ್ತಿಧರ್ಮ, ವಾಸುದೇವನೆಂಬ ಹೆಸರಿನ ಪರಬ್ರಹ್ಮ—ಇವುಗಳನ್ನು ತಿಳಿಸುವದೇ ಗೀತೆಯ ಉದ್ದೇಶವು, ಸಮಸ್ತವೇದಾರ್ಥದ ಸಾರವೇ ಇದು.

ಕರ್ಮಪ್ರಧಾನ ದೃಷ್ಟಿಯಿಂದ ಕರ್ಮಯೋಗವೆನಿಸುವದು ಈಶ್ವರಪ್ರಧಾನ ದೃಷ್ಟಿಯಿಂದ ಭಕ್ತಿಯೋಗವೆನಿಸುತ್ತದೆ. ಕರ್ಮಯೋಗ, ಧ್ಯಾನಯೋಗ, ಭಕ್ತಿಯೋಗ ಗಳು ಒಂದಕ್ಕಿಂತ ಒಂದು ಮೇಲಿನ ಮಟ್ಟದ ಸಾಧನಗಳು. ವಾಸುದೇವನೇ ಎಲ್ಲವೂ ಎಂದು ಆತನನ್ನೇ ಭಜಿಸುವವನು ಮಹಾತ್ಮನು. ಇಂತಹ ಗೀತೋಕ್ತವಾಗಿರುವ ವಿಶ್ವವ್ಯಾಪಕಧರ್ಮ ತತ್ತ್ವವನ್ನು ಅರಿತ ಜ್ಞಾನಿಯು 'ತನ್ನ ಆತ್ಮನಾಗಿರುವ ವಾಸುದೇವನೇ ಬ್ರಹ್ಮಾದಿಸ್ತಂಬಪರ್ಯಂತವಾದ ಸಕಲ ಭೂತಗಳಿಗೂ ಆತ್ಮನು' ಎಂಬ ನಿಶ್ಚಯವುಳ್ಳವನಾಗಿ ಯಾವ ಪ್ರಾಣಿಗೂ ಹಿಂಸೆ ಮಾಡದೆ ಸರ್ವಭೂತ ಹಿತರತನಾಗಿರುತ್ತಾನೆ. ಇಂತಹ ವಿಶ್ವಪ್ರೇಮವೇ ವಿಶ್ವೇಶ್ವರನಾದ ವಾಸುದೇವನ ಭಜನೆಯು, ವಾಸುದೇವನ ಜ್ಞಾನವೇ ಪರಮಪುರುಷಾರ್ಥಸಾಧನವು, ಸ್ವಧರ್ಮ ವನ್ನು ಆತನ ಆರಾಧನೆಯನ್ನಾಗಿ ತಿರುಗಿಸಿಕೊಳ್ಳುವ ಕರ್ಮಯೋಗವೇ ಆತನ ಜ್ಞಾನಕ್ಕೆ ಉಪಾಯವು. ಹೀಗೆಂಬುದು ಶಂಕರಾಚಾರ್ಯರ ಭಾಷ್ಯದಿಂದ ನಮಗೆ ಲಭಿಸಿರುವ ಮಂಗಲಕರ ಉಪದೇಶವು"—ಏಳನೆಯ ಸಂಸ್ಕರಣ-೨೦೦೪, ಎರಡು ಸಂಪುಟಗಳಲ್ಲಿ, ಪುಟಗಳು ೧೧೭೬ + ೫೦ ಬೆಲೆ: ರೂ. ೪೦೦.

**ಪರಿಶುದ್ಧವೇದಾಂತಸಾರಃ ಶ್ರೀಶ್ರೀಗಳು ಪುಟ ೪೪, ಬೆಲೆಃ ರೂ. ೧೦**

"ವೇದಗಳ ಕೊನೆಯಲ್ಲಿರುವ ತತ್ತ್ವವಿಚಾರಭಾಗಗಳೇ ವೇದಾಂತ ಅಥವಾ ಉಪನಿಷತ್ತು. ಉಪನಿಷತ್ತು, ಗೀತೆ, ವೇದಾಂತಸೂತ್ರಗಳು ಒಟ್ಟುಗೂಡಿಸಿ ಪ್ರಸ್ಥಾನ ತ್ರಯವೆನ್ನುತ್ತಾರೆ. ಪರಿಶುದ್ಧವೇದಾಂತವೆಂದರೆ ಶ್ರೀಗೌಡಪಾದರ ಮಾಂಡೂಕ್ಯಕಾರಿಕೆ ಗಳಲ್ಲಿ ಶ್ರೀಶಂಕರರ ಪ್ರಸ್ಥಾನತ್ರಯಭಾಷ್ಯಗಳಲ್ಲಿ ಕಾಣಸಿರುವ ಯಾವ ಹೊರಗಿನ ವಿಚಾರಗಳ ಬೆರಿಕೆಯೂ ಇಲ್ಲದ ಅಪ್ಪಟ ವೇದಾಂತವೇ ಇದರ ಹೆಗ್ಗುರುತು. ಉಪನಿಷತ್-ಗೀತಾ-ಸೂತ್ರಭಾಷ್ಯಗಳಲ್ಲೊಂದರ ಆಧಾರವಿರುವದು. ಎರಡನೆ ಯದು ಯುಕ್ತ್ಯನುಭವಗಳಿಗೆ ಹೊಂದುಗಡೆಯಾಗಿರಬೇಕು. ಯುಕ್ತಿ ಎಂದರೆ ತರ್ಕ ಶಾಸ್ತ್ರಪಂಕ್ತಿಗಳ ಗಡಿಬಿಡಿಯಲ್ಲ, ಅನುಭವಕ್ಕೆ ಹೊಂದಿಕೊಂಡು, ಪ್ರತಿ ಹೆಜ್ಜೆಗೂ ನಿಷ್ಪಕ್ಷಪಾತಿಯಾದ ಬುದ್ಧಿಗೆ ಒಪ್ಪಾಗುವಂತೆ ತಿಳಿಸಿಕೊಡುವ ವಿಷಯವಿಚಾರಕ್ರಮ. ಅನುಭವವೆಂದರೆ ಒಬ್ಬವ್ಯಕ್ತಿಗೆ ಮಾತ್ರ ಮೀಸಲಾಗಿರುವ ಸಮಾಧಿ, ತಪಃಸಿದ್ಧಿಗಳ ಅರಿವಲ್ಲ ; ಲೋಕದಲ್ಲಿ ಎಲ್ಲರಿಗೂ ಇರುವ ಸಾರ್ವತ್ರಿಕಾನುಭವ, ಅಂದರೆ ವಿಷಯ ರಾಶಿಯನ್ನೆಲ್ಲ ಕುರಿತ ಒಟ್ಟು ಅನುಭವವು, ದೇಶಕಾಲಾವಸ್ಥೆಗಳ ಕಟ್ಟಿಲ್ಲದೆ ಎಲ್ಲಕ್ಕೂ ಅನ್ವಯಿಸುವ ಪೂರ್ಣಾನುಭವವು. ಹೀಗೆ ಶಾಂಕರವೇದಾಂತದ ಸಾರವನ್ನು ಹಿಂಡಿ ತಿಳಿಗನ್ನಡದಲ್ಲಿ ಮುಂದಿಡುವದು, ಶ್ರೀಶಂಕರರ ದೊಡ್ಡಗ್ರಂಥಗಳ ಲಾಭವನ್ನು ಪಡೆಯುವ ಆಧ್ಯಾತ್ಮಿಕ ಹಸಿವನ್ನುಂಟುಮಾಡುವದು, ಈ ಪುಸ್ತಕದ ಉದ್ದೇಶಗಳು".

**ಶ್ರೀವಿವೇಕಾನಂದ ಸ್ವಾಮಿಗಳ "ಭಕ್ತಿಯೋಗ"—ಅನುವಾದಃ ಶ್ರೀಶ್ರೀಗಳು**

"ಶ್ರೀ ವಿವೇಕಾನಂದ ಸ್ವಾಮಿಗಳವರು ನಮ್ಮ ದೇಶದಲ್ಲಿ ಖಿಲವಾಗುತ್ತಿದ್ದ ಧರ್ಮಾಭಿಮಾನವನ್ನು ಈಗಿನ ಕಾಲಕ್ಕೆ ಒಪ್ಪಾಗುವ ರೀತಿಯಲ್ಲಿ ಉದ್ಬೋಧ ಗೊಳಿಸಿದ ಮಹಾಕೀರ್ತಿಗೆ ಪಾತ್ರರಾದ ಲೋಕಪೂಜ್ಯರಾದ ಮಹನೀಯರು. ಅವರ ಮಹಾಸಂಕಲ್ಪದ ಫಲವಾಗಿ ಭರತಖಂಡದ ಅಧ್ಯಾತ್ಮವೃಕ್ಷವು ಉತ್ಕೃಷ್ಟವಾಗಿ ಚಿಗುರಿ, ಹೂಬಿಟ್ಟು ಭೂಮಂಡಲದ ನಾಗರಿಕ ಜನರೆಲ್ಲರೂ ಸವಿದು ಚಪ್ಪರಿಸಿ ತಲೆದೂಗು ವಂತಹ ಉತ್ತಮ ಫಲವನ್ನು ಬಿಟ್ಟಿತು.

ಶ್ರೀವಿವೇಕಾನಂದರು ಭಕ್ತಿಪಂಥದವರೆಲ್ಲರ ಮಾರ್ಗಗಳನ್ನೂ ಒಟ್ಟು ಗೂಡಿಸಿ ಉಪನಿಷತ್ತುಗಳ ಉಪಾಸನಾ ಮಾರ್ಗಕ್ಕೂ ಇವುಗಳಿಗೂ ಇರುವ ಸಂಬಂಧವನ್ನೂ ಬೆಳಕಿಗೆ ಹಿಡಿದಿರುತ್ತಾರೆ. ಅನುಭವವನ್ನೇ ಪ್ರಧಾನವಾಗಿಟ್ಟುಕೊಂಡ ಈ ಪ್ರತಿಪಾದನೆ ಯಲ್ಲಿ ಸ್ವಾಮಿಗಳವರು ಅನುಸರಿಸಿರುವ ಒಂದಾನೊಂದು ವಿಶೇಷ ಕ್ರಮವೂ ಈಗಿನ ಕಾಲದವರಿಗೆ ಅವರ ಉಪದೇಶವು ಒಪ್ಪಾಗಿರುವಂತೆ ಮಾಡಿರುತ್ತದೆ.

ಭಕ್ತಿಯನ್ನು ಶಾಸ್ತ್ರ ತರ್ಕದಿಂದ ಸಂಪಾದಿಸುವುದಕ್ಕೆ ಆಗುವುದೇ ಇಲ್ಲ ; ಅದು ಭಾವಪ್ರಧಾನರಾದವರ ಹೃದಯದಲ್ಲಿ ಪರಮೇಶ್ವರನ ಅನುಗ್ರಹದಿಂದ ತಾನೇ ತೋರಿಕೊಳ್ಳಬೇಕಾದದ್ದಾಗಿದೆ. ಸ್ವಾಮಿಗಳವರ ಗ್ರಂಥದಿಂದ ನಮ್ಮಗಳ ಹೃದಯದಲ್ಲಿ ಪ್ರೇಮರಸವು ಉಕ್ಕುವದಕ್ಕೆ ಸಹಾಯವಾಗುತ್ತದೆ.

# SPIRITUAL CONCENTRATION

**Sri Sri Sachidanandendrasaraswati Swamiji**

"Ātman verily, my dear Maitreyī, is to be seen by listening to teaching about Him, by thinking over and by contemplation. So has Yājñavalkya enumerated the means of self-realization to his wife Maitreyī. Ācārya Śaṅkara explains this as follows: 'First one has to listen to teaching about Him by the teacher as well as the *Śāstra*, then to think over the teaching by reasoning, and to contemplate upon the Reality. When these disciplines of listening, reasoning and contemplation are all accomplished, and harmonized, then and then only, the true vision of the One Brahman is achieved and not otherwise, by mere listening" (Bṛ. Bh. 2-4-5).

More valuable than either of these is nididhyāsana (contemplation), for it is the final means of corroborating the teaching by one's own experience. It is also known as vijñāna (special knowledge, assimilation). Chāndogya, says "He is to be sought out, he is to be known". 'Seeking' there is but listening and thinking over for there can be no other way of actually seeking out one's own self. And "Vijiñāsitavyaḥ" there means that one should know Ātman in a special way, that is, through one's own intuition" (Ch. Bh. 8-7-1).

When we talk of Brahmajñāna or Ātmajñāna, the word jñāna, does not signify either the act or the means of knowing. Knowledge involved in the word jijñāsā (wish to know or enquiry) is the resultant knowledge or final intuition, *Jñāpti*. "The object of desire denoted by the desiderative suffix (the ending in the word jijñāsā) is the knowledge resulting in *Avagati* (final intuitive consciousness), for desire aims at a result. It is Brahman that is desired to be intuited by jñāna the means of final knowledge. And it is the intuitive knowledge of Brahman which is the highest goal of man,

because it destroys, once for all, Avidyā and other evils which are the seed of *saṁsāra*" (SBh. 1-1- 1). Everything becomes known when the Ātman is thus seen, for there is nothing else independent of Ātman. All action, means of action, and ends are due to *Avidyā* (misconception), just as the snake in the rope is the result of a misconception of the rope. Hence the Śruti says "Everything becomes known (when Ātman is seen)" (Bṛ. Bh. 2-4-5).

"Since listening and the other means are to culminate in the vision, they must bear fruit in this very life in the same way as enjoined acts such as pounding paddy are to end in the appearance of rice-grains" (SBh. 4-1-1). Hence listening and other courses of discipline are to be pursued till the vision of Ātman ensues. "But in the case of those who are endowed with an adroit mind unhindered by ignorance, doubt, or misconception, the repetition of these disciplines is futile, since they would be able to intuit the meaning of the text 'That thou art' even when it is taught to them but once" (SBh. 4-1-2). Such aspirants are qualified in the highest sense for the teaching of Vedānta.

"*Upāsanā* and *nididhyāsana* are means of mental acts involving a repeated process" (SBh. 4-1-1). Only, *nididhyāsana* is a particular species of *upāsanā* having a result to be experienced in this very life. "The limit of application of those *upāsanās* which are meant for perfect knowledge, is quite determined. For it cannot be insisted that some additional effort is necessary even after the effect, to wit, right vision of Ātman, is achieved" (SBh. 4-1-12); not so in the case of the other *upāsanās*, for their practice has to be continued for life, since the effect is to be experienced only after departure from the body, and depends on the last thought at the moment of dying.

*Nididhyāsana* is also a kind of steady flow of thought enjoined by the Śruti,—a mental process of focusing one's closest attention in order to realize the nature of its object.

# THE ONLY WAY—ENQUIRE WITHIN

K. R. Manohara
Radhakrishna Nilaya, Basaveshvara Talkies Road, Chitradurga 577501;
Phone: 422940, 423540

The great theme of the Vedanta is oneness of life, oneness of everything. Vedanta also demonstrates that all our misery comes through ignorance, and this ignorance is the obsession with manifoldness, the separation between man and man, between nation and nation, between earth and moon, between moon and sun. Out of this idea of separation comes all misery. But, Vedanta says this separation does not exist, it is not real. It is merely apparent, the limitations imposed by the five instruments of knowledge man is bound with—the five sensory organs.

It says, 'drsyah dhi drttayah saksi drg eva na tu drsyate'. "All the scenes before us are projections of our intellect." Our intellect as deemed to work only in the waking state will confine us forever within the limits of time and space. Hence no explanation offered from points of view restricted to waking life can transcend it or include the great truth that lies at the back of life, at the back of all phenomena. Everyone who has endeavoured to account for the empirical world has been confronted by ignorance at every step, and has been obliged to confess that human wit could go only so far and no farther. The word Maya implies all this and more.

A beautiful example is given to show how ignorance is inexplicable. Sometimes we seek thick mists stagnant in space. If we try to grab it nothing comes in our hand. It is not a wall, we can walk through it, but it obstructs our vision and hinders our progress. The mist remains there till the bright sun-light comes and evaporates it. Similarly in the space-of-Consciousness, there is this inexplicable

ignorance which provides us with all sorts of troubles and endless sorrows. It can be dispelled only by the sun of knowledge, born out of proper enquiry.

What is proper enquiry? It is very interesting to note that life of ignorance depends on lack of enquiry. Accepting the existence of ignorance, if we ask questions about it, such as 'When did it begin?' 'How it deludes us?' etc., it will not solve our problem. It is not a creative enquiry. Many scholars break their heads trying to gain knowledge about ignorance. Instead of that we should question the very existence of ignorance. This type of enquiry alone gives rise to the knowledge which dispels ignorance.

Ignorance (Avidya) is natural to the man who takes identification with from body to ego. If we ask a man, Do you know your true nature according to Shruti, that you are non-dual Brahman? He replies frankly, 'I don't know (non-perception). If we ask him Who are you? He simply says so and so (misconception). If we compel him further as to how he ascertained that he is the body and body is his, he says he has got so many doubts (doubting). In this way the non-perception, misconception and doubting are there for everyone regarding his true nature. So, it is evident that Avidya (ignorance) is there for all so long as the unity of non-dual Atman is not intuited. Vedanta accepts Avidya regarding one's own nature and that Avidya is removed inevitably by Vidya (self-knowledge).

After getting Self-knowledge, one takes a stand in his true nature of non-dual Self and realizes that his nature is Absolute Consciousness. Hence from this stand-point of transcendental reality, Sri Shankara has said that there is no Avidya to anybody. It follows that, according to Shankara's Vedanta, Brahman alone is the Self of each one of us and that the individual self in its real nature is Brahman and nothing else. So enquiry into the real nature of one's own Self is the only way of seeking to know Brahman.

# ಕಾರ್ಯಾಲಯದ ಸಮಾಚಾರ

ಶ್ರೀಗುರುಪೂರ್ಣಿಮೆಯಂದು ೨-೭-೦೪ರ ಬೆಳಿಗ್ಗೆ ಗುರುಪಾದುಕಾಪೂಜೆ ನಡೆಯಿತು. ಜುಲೈ ೨ ರಿಂದ ೭ರ ವರೆಗೆ ಪ್ರತಿ ಸಂಜೆ ೫ ರಿಂದ ೭ರ ವರೆಗೆ ಶ್ರೀಶ್ರೀವಿರಜಾನಂದಶ್ರೀಗಳು "ರಮಣ ವಂದನೆ" ಪ್ರವಚನಗಳನ್ನು ನೀಡಿದರು. ಜುಲೈ ೯ ರಿಂದ ೧೫ರ ವರೆಗೆ ಸದ್ಗುರು ಆರಾಧನಾ ಸಪ್ತಾಹವನ್ನು ಆಚರಿಸಲಾಯಿತು.

ಮುಂದಿನ ಸಪ್ತಾಹಗಳು: ಆಶ್ವೀಜಶುದ್ಧ ಪಾಡ್ಯದಿಂದ ದಶಮಿವರೆಗೆ (ಅಕ್ಟೋಬರ್ ೧೫-೨೩) ಶರನ್ನವರಾತ್ರಿ, ಡಿಸೆಂಬರ್ ೧೬-೨೨ ಗೀತಾಜಯಂತಿ, ಜನವರಿ ೧-೭ ಶ್ರೀಸದ್ಗುರು ಜಯಂತಿ, ಕಾರ್ಯಕ್ರಮಗಳನ್ನು ನಡೆಸಲು ಉದ್ದೇಶಿಸಿದೆ. ಡಿಸೆಂಬರ್ ೧೦-೧೨ ಶ್ರೀ ಕೋಡಿಹಳ್ಳಿ ಲಕ್ಷ್ಮೀನಾರಾಯಣರಾವ್ ಟ್ರಸ್ಟ್ ಮತ್ತು ಶುಕ್ಲಯಜುರ್ವೇದಾ ಟ್ರಸ್ಟ್‌ನ ಸಹಕಾರದಿಂದ ಕಾರ್ಯಾಲಯದಿಂದ ಯಾಜ್ಞವಲ್ಕ್ಯಾಶ್ರಮದಲ್ಲಿ ಪ್ರವಚನಗಳಿವೆ.

ಪಂಡಿತ ಶ್ರೀ ಸುಬ್ರಾಯಶರ್ಮರ ಎರಡನೆ ಕೃತಿ, 'ವೇದಾಂತ ಸಂವತ್ಸರ'ವನ್ನು, ಪ್ರಕಾಶಕರು: ಶ್ರೀ ನಿತ್ಯಾನಂದ ಪ್ರಿಂಟರ್ಸ್, ಅಶೋಕನಗರ, ಬೆಂಗಳೂರು ೫೦, ೨೯-೮-೨೦೦೪ ರಂದು ರಾಮಕೃಷ್ಣ ಮಠದ ಪ್ರವಚನ ಮಂದಿರದಲ್ಲಿ, ತುಂಬಿದ ಸಭಿಕರ ಸಮ್ಮುಖದಲ್ಲಿ, ಸ್ವಾಮಿ ಹರ್ಷಾನಂದಜೀ ಮಹಾರಾಜ್ ಅವರು ಬಿಡುಗಡೆ ಮಾಡಿದರು. ವಿಜೃಂಭಣೆಯ ಈ ಸಮಾರಂಭ ದಲ್ಲಿ ಶ್ರೀ ಎಸ್. ಕೆ. ರಾಮಚಂದ್ರರಾಯರು, ಶ್ರೀ ಆರ್. ಗಣೇಶ್, ಮತ್ತೂರಿನ ಶ್ರೀ ಅಶ್ವತ್ಥ ನಾರಾಯಣ ಅವಧಾನಿಗಳು ಈ ಪುಸ್ತಕವನ್ನು, ಗ್ರಂಥಕರ್ತರ ಸಾಹಸವನ್ನು ಕೊಂಡಾಡಿದರು.

ಜೂನ್ ೧೦–ಸೆಪ್ಟೆಂಬರ್ ೧೦ ಅವಧಿಯಲ್ಲಿ ಬಂದಿರುವ ಹಣ: ಶ್ರೀಸದ್ಗುರು ಆರಾಧನೆಗೆ ರೂ. ೨೦,೫೧೩, ಇತರ ಕಾಣಿಕೆ ರೂ. ೧,೮೯೦, ಹುಂಡಿ ರೂ. ೪,೨೪೮.೨೫, ಚಂದಾ (ಪರಿಪಾಲಕರು (೨), ಆಶ್ರಯದಾತರು (೫), ದಾನಿಗಳು (೩೨, ಹೊಸಬರು ೫) ವಾರ್ಷಿಕ ಚಂದಾದಾರರು)—ರೂ. ೩೩,೪೪೬ ಈ ಎಲ್ಲ ಅಭಿಮಾನಿಗಳಿಗೂ ಕೃತಜ್ಞತೆಗಳು, ಶ್ರೀಗುರುಗಳ ಅನುಗ್ರಹವಿರಲೆಂದು ಪ್ರಾರ್ಥನೆ.

ಖರ್ಚು: ಸದ್ಗುರು ಆರಾಧನೆಗೆ: ಸಂತರ್ಪಣೆ ರೂ. ೧೩,೦೦೦, ಪ್ರವಚನಗಳಿಗೆ ಸಂಭಾವನೆ ರೂ. ೨,೨೫೦, ಹೂವು ಹಣ್ಣು ಕಾಯಿ ರೂ. ೧,೪೩೯, ಮುದ್ರಣ ರೂ. ೬೫,೦೩೨, ಅಂಚೆ ರೂ. ೨೬,೧೫೩, ನೀರು ರೂ. ೩೧೫, ವಿದ್ಯುತ್ ರೂ. ೪,೯೦೬, ದಿನಪತ್ರಿಕೆ ರೂ.೨೨೫, ದೂರವಾಣಿ ರೂ. ೩,೪೨೭, ಸಂಬಳ: ಶ್ರೀಸುಬ್ರಾಯಶರ್ಮರು ರೂ. ೨೪,೦೦೦, ಸಿಬ್ಬಂದಿ ರೂ. ೭,೪೮೬

ಮುದ್ರಣ ತಡವಾದ ಶ್ರೀವಿವೇಕಾನಂದಸ್ವಾಮಿಗಳ 'ಭಕ್ತಿಯೋಗ' ಪುಸ್ತಕವು (ಅನುವಾದ: ಶ್ರೀಶ್ರೀಗಳು) ಅಕ್ಟೋಬರ್ ಮೊದಲಲ್ಲಿ ಬರಲಿದೆ. ಬೆಲೆ: ರೂ. ೪೦, ಪುಟಗಳು ೧೧೨ + ೧೬

ಗಮನಿಸಿ: ಬಡ್ಡಿದರ ಕುಸಿತದಿಂದಾಗಿ ಕಾರ್ಯಾಲಯದ ವರಮಾನ ಅರ್ಧದಷ್ಟು ಇಳಿದಿದೆ. ಈ ಕೊರತೆಯನ್ನು ಸಾಧ್ಯವಾದಮಟ್ಟಿಗೂ, ಶ್ರೀಶ್ರೀಗಳವರ ಸರಳ ನಡೆಯ ನಿಯಮದಂತೆ ಆಡಂಬರ, ವಿಜೃಂಭಣೆ, ಪ್ರದರ್ಶನಪ್ರಚಾರಗಳನ್ನು ಕೈಬಿಟ್ಟು, ಅಗತ್ಯವನ್ನು ಬಿಡದ ಮೂಲಕ್ಕೆ ಕೊಡಲಿಹಾಕದ ಜಿಪುಣತನವನ್ನು ಆಶ್ರಯಿಸದ ಮಿತವ್ಯಯದಿಂದ, (ಜುಲೈ ಸಂಚಿಕೆಯ ಪುಟ ೪೪, ೪೫ರ ಲೆಕ್ಕ ಪತ್ರಗಳಲ್ಲಿ ಕಾಣುವಂತೆ) ಸಾಕಷ್ಟು ಮಟ್ಟಿಗೆ ಸರಿದೂಗಿಸಿದೆ. ಆದರೆ ದರಗಳ ಏರಿಕೆ, ಅಧ್ಯಾತ್ಮಪ್ರಸಾರಕಾರ್ಯ ವಿಸ್ತರಣೆಯ ಪ್ರಯತ್ನಗಳಿಗೆ ಹೆಚ್ಚಿನ ಹಣ ಅವಶ್ಯಕ. ಇದು ಭಕ್ತಾದಿಗಳ ಸಹಾನುಭೂತಿ ಔದಾರ್ಯದ ನೆರವಿನಿಂದ ಮಾತ್ರವೇ ಸಾಧ್ಯ. ಇದರಲ್ಲಿ ಕಡಿಮೆ, ಹೆಚ್ಚು ಎಂಬುದಿಲ್ಲ—ಮನಸ್ಸೇ, ಹೃದಯವಂತಿಕೆಯೇ ದೊಡ್ಡದು. ಪತ್ರಿಕೆ, ಪ್ರವಚನ, ಇನ್ನಿತರ ಕಾರ್ಯಕ್ಕೆ ೫೦ ರಿಂದ ಪ್ರಾರಂಭಿಸಿ ೫೦ರ ಹೆಚ್ಚಳದಂತೆ ಕೊಡುವದೆಲ್ಲ ಉಪಕಾರವೇ!

ಕಾರ್ಯಾಲಯದ ಭಕ್ತರೆಲ್ಲರಿಗೂ ಭಗವಂತನ ಅನುಗ್ರಹ ಸರ್ವದಾ ಇರಲಿ ಎಂದು ಪ್ರಾರ್ಥನೆ

ಪರಿಪಾಲಕರು
ಶ್ರೀಪತಿ ಎ. ಶ್ರೀಧರ, ಬೆಂಗಳೂರು
ದೀನಬಂಧು ದೇವಸ್ಥಾನ, ಬೆಂಗಳೂರು
ಆಶ್ರಯದಾತರು
ಸಿ. ರಾಮನಾಥ್, ಬೆಂಗಳೂರು
ಅಭಿನವ ವಿದ್ಯಾಭಾರತಿ ಟ್ರಸ್ಟ್, ಬೆಂಗಳೂರು
ಹೆಚ್. ಕೆ. ಸುಬ್ರಹ್ಮಣ್ಯ, ಬೆಂಗಳೂರು
ವಿ. ಕೆ. ತಿಮ್ಮಪ್ಪಯ್ಯ ದೀಕ್ಷಿತ್, ಬೆಂಗಳೂರು
ಸುಂದರೇಶನ್ ಎನ್, ಬೆಂಗಳೂರು
ದಾನಿಗಳು: ಬೆಂಗಳೂರಿನಿಂದ
ಹೆಚ್. ವಿ. ರಾಘವೇಂದ್ರರಾವ್
ಎಂ. ಎನ್. ಗಿರೀಶ್
ಕೆ. ಎಸ್. ವೆಂಕಟೇಶ್
ಎಸ್. ವಿಜಯಕೀರ್ತಿ
ಸುಬ್ಬಲಕ್ಷ್ಮಮ್ಮ
ರಾಜೇಶ್ವರಿ ರಘುನಂದನ್
ಕೆ. ನಾರಾಯಣರಾವ್
ಬಿ. ಎಲ್. ಶಂಕರನಾರಾಯಣರಾವ್
ಟಿ. ಕೆ. ಪುಟ್ಟಣ್ಣಯ್ಯ
ಕೆ. ಆರ್. ಚಂದ್ರಶೇಖರ
ಕೆ. ಎನ್. ಲಕ್ಷ್ಮಿದೇವಮ್ಮ
ಕೆ. ರಾಮಚಂದ್ರ
ಬಿ. ಎನ್. ಜಿ. ಧ್ವಜನ್
ಕೆ. ಆರ್. ನಾಗರಾಜನ್
ವೈ. ಎಸ್. ಹರಿಹರಮೂರ್ತಿ
ಎಂ. ಸೂರ್ಯನಾರಾಯಣ
ಡಾ. ಎಂ. ಆರ್. ರಾಮಲಿಂಗಯ್ಯ
ಬಿ. ಎನ್. ಗೌರಮ್ಮ
ಟಿ. ವಿ. ರಾಮಚಂದ್ರಪ್ಪ
ಎ. ವಿ. ಸುಂದರೇಶ್
ಡಾ. ಬಿ. ಎನ್. ಆದಿನಾರಾಯಣ
ಕೊಟ ಕೋದಂಡರಾಮ್
ಬಿ. ಆರ್. ಶ್ರೀಕಂಠಯ್ಯ
ಬಿ. ಎಲ್. ಕೃಷ್ಣಸ್ವಾಮಿ
ಬಿ. ಎನ್. ವೆಂಕಟಾಚಲಪತಿ
ಕೆ. ನಾರಾಯಣ
ಬಿ. ಸದಾಶಿವರಾವ್
ಬಿ. ಎಸ್. ಗುಂಡೂರಾವ್
ಎ. ಎಂ. ಕುಪ್ಪಣ್ಣಸೆಟ್ಟಿ
ಜಿ. ಮಧುಸೂದನ್

ಸಿ. ಸಿ. ಗೋಪಾಲಕೃಷ್ಣಸ್ವಾಮಿ
ಟಿ. ವಿ. ಶೇಷಾದ್ರಿ
ಕೆ. ಗೋಪಾಲರಾವ್
ಎಲ್. ಶಿವರಾಮ್
ವಿ. ಎಸ್. ಶೇಷಪ್ಪ
ಎಂ. ವಸಂತಭಟ್
ಎನ್. ಎಸ್. ಗಣಪತಿ ಭಟ್
ವಿ. ವರದರಾಜು
ಎಸ್. ಪ್ರಭಾಕರರಾವ್
ಎನ್. ಎಮ್. ಸತ್ಯನಾರಾಯಣ
ಕೆ. ಸಿ. ನಾಗರಾಜ
ಆರ್. ಧನಲಕ್ಷ್ಮಿ
ಎಂ. ಎಸ್. ಕುಮಾರ್
ಹೆಚ್. ಎಸ್. ಸತ್ಯನಾರಾಯಣರಾವ್
ಹೆಚ್. ಎಸ್. ಕೇಶವಮೂರ್ತಿ
ಹೆಚ್. ಹೆಚ್. ರಾಜರತ್ನಂಗುಪ್ತ
ಗೋಪಾಲಕೃಷ್ಣ
ಬಿ. ಕೆ. ರಾಮಸ್ವಾಮಿ
ಆರ್. ಶ್ರೀನಿವಾಸಮೂರ್ತಿ
ಜಿ. ಶುಭಾಕರರಾವ್
ಡಾ. ಎನ್. ಕೆ. ಎಸ್. ಮೂರ್ತಿ
ಬಿ. ಶೇಷಪ್ಪರಾಜು
ಪಿ. ಡಿ. ಶನಾಯ್
ಎಸ್. ಜಿ. ಹಿರಣ್ಯಭಟ್ಟ
ಜಿ. ಎಸ್. ಅಗ್ನಿಹೋತ್ರಿ
ಶ್ರೀನಿವಾಸಯ್ಯ ಶಾರದಮ್ಮ
ಕೆ. ವಿ. ನರೇಶ್
ಪದ್ಮಿನಿ ಕೇಶವ್
ರಾಧಾಕೃಷ್ಣಗುಪ್ತ ಎಸ್. ವಿ.
ಕೆ. ಎ. ಪರಮೇಶ್ವರ
ಕೆ. ಸುಬ್ರಹ್ಮಣ್ಯಂ
ಎಂ. ಎಸ್. ಸುಬ್ಬಮ್ಮ
ಆರ್. ಗುರುರಾಜ್
ಎ. ಜಿ. ದತ್ತಾತ್ರಿ
ಶೇಷಮ್ಮ ದೊರೆಸ್ವಾಮಿ ಅಯ್ಯಂಗಾರ್
ಎಂ. ಎಲ್. ಸೂರ್ಯಪ್ರಕಾಶ್
ಹೆಚ್. ಎಸ್. ನಾಗರಾಜ
ಬಿ. ರಾಘವೇಂದ್ರರಾವ್
ಎಸ್. ರಾಮಕೃಷ್ಣರಾವ್
ಬಾಲಸುಬ್ರಹ್ಮಣ್ಯಂ

ಎಂ. ಎಸ್. ಎಸ್. ಸ್ವಾಮಿ
ಎಸ್. ದಾನಪ್ಪ
ಜಿ. ಹೆಚ್. ಉಮಾಶಂಕರ್
ಕೆ. ಟಿ. ನಳಿನಿ
ಬಿ. ಸತ್ಯನಾರಾಯಣ
ಬೈರಪ್ಪ
ಕೆ. ವಿ. ಧ್ರುವಕುಮಾರ್
ಟಿ. ಎನ್. ಪ್ರಕಾಶ್
ಎಸ್. ಯಶೋದಮ್ಮ
ಸೂರ್ಯನಾರಾಯಣರಾವ್
ಬಿ. ಎನ್. ನರಸಿಂಹಪ್ರಸಾದ್
ಮೇಜರ್ ರಂಗನಾಥ್
ಕೆ. ಎಸ್. ರಾಮದಾಸ್
ಎ. ಜಿ. ಸತ್ಯನಾರಾಯಣ
ಜಿ. ಶಾಂತಕುಮಾರಗುಪ್ತ
ಕೆ. ಆರ್. ನಾರಾಯಣರಾವ್
ಟಿ. ಶ್ರೀನಿವಾಸಮೂರ್ತಿ
ಸಿ. ನಾಗರಾಜು
ದೇವಾಂಗಸಂಘ, ಹೊಸದುರ್ಗ
ಜಿ. ಎಸ್. ನಾಗರತ್ನಮ್ಮ ಹೊಸದುರ್ಗ
ಹಂಸವೇಣಿ, ದುಗನೂರು
ಹೆಚ್. ಆರ್. ರಾಮಚಂದ್ರರಾವ್, ಸಿರಾ
ಎಸ್. ಎಸ್. ಮಠ, ಸುಂಗತನ್ (ಬಿಜಾಪುರ)
ಜಿ. ಶ್ರೀಹರಿ, ಮೈಸೂರು
ಹೆಚ್. ಎಮ್. ಗುರುನಾಥ್, ಚನ್ನಗಿರಿ
ಕೆ. ರಾಮಚಂದ್ರಭಕ್ತ, ಮುಂಬಯಿ
ಹೆಚ್. ಜಿ. ಪಾಟೀಲ್, ಸೌಂಶಿ
ಎಲ್. ಕೆ. ಜೋಷಿ, ಗುಲ್ಬರ್ಗ
ಎಂ. ಆರ್. ಸುಂದರ್, ನ. ರಾ. ಪುರ
ಪಿ. ವೆಂಕಟರಾಮಯ್ಯ
ಎ. ಎಸ್. ಕುಲ್ಕರ್ಣಿ, ಆಗಡಿ
ಹೆಚ್. ಎಸ್. ಜಗದೀಶನ್, ಶಿವಮೊಗ್ಗ
ಡಿ. ಕೆ. ಮುಗಳ್‌ನಗಾಂವ್, ಗುಲ್ಬರ್ಗ
ಎಸ್. ಕೃಷ್ಣಮೂರ್ತಿ, ಕೊರಟಗೆರೆ
ಕೆ. ಪ್ರಸನ್ನಕುಮಾರ್, ಗೌರಿಬಿದನೂರು
ಕೆ. ಎಂ. ಜಯಲಕ್ಷ್ಮಿ, ಚೆನ್ನೈ

ವಿ. ಎನ್. ದೇವಾಂಗ ಮಠ, ಧಾರವಾಡ
ಬಿ. ಆರ್. ಸುಶೀಲಮೂರ್ತಿ, ಮೈಸೂರು
ಟಿ. ಎಸ್. ಶ್ರೀಕಂಠಯ್ಯ, ಮೈಸೂರು
ಡಾ. ಆರ್. ಕೆ. ಗುಳೇದ
ಕೆ. ವಿ. ವಕ್ಕುಂದ್, ಹುಬ್ಬಳ್ಳಿ
ಪಾಂಡುರಂಗಭಟ್, ಕುಂಬಳೂರು
ಕೆ. ನಾಗರಾಜಶೆಟ್ಟಿ, ಗಂಗಾವತಿ
ಎಸ್. ವಿ. ನಾಗರಾಜ್, ಸಿಂಗಟಗೆರೆ
ಶ್ರೀಕಾಂತಜೋಷಿ, ಶಹಾಬಾದ್
ಎಸ್. ಎಂ. ಗೋಡಕಿಂಡಿ, ಬರೋಡ
ಕೆ. ಎಸ್. ಭಾಸ್ಕರಭಟ್, ಭೀಮನಕೋಣೆ
ವಿ. ವಿ. ಸೋನಾರ, ಬಿಜಾಪುರ
ಕೆ. ರೋಸಪ್ಪ, ಧೋನೆ
ಕೆ. ವಿ. ಕೇಸರಿ, ಕಡಬ
ಬಿ. ಎಸ್. ಕೆ. ಸಗನೂರ್, ಗುಲ್ಬರ್ಗ
ಸಿಟಿ ಸೆಂಟ್ರಲ್ ಲೈಬ್ರರಿ, ಮಂಗಳೂರು
ವಿ. ವಿ. ಮಹಲಿಂಗಪುರ, ಹಲ್ಯಾಳ
ಎಸ್. ಕೆ. ನಾಗಪ್ಪ, ತೀರ್ಥಹಳ್ಳಿ
ಎನ್. ನರಸಿಂಹಯ್ಯ, ಮೈಸೂರು
ಗಿರಿಜಮ್ಮ, ಸಾಗರ
ಜಿ. ಆರ್. ಕುಲ್ಕರ್ಣಿ, ಹುಬ್ಬಳ್ಳಿ
ಎನ್. ಎಸ್. ಶ್ರೀಕಂಠಯ್ಯ, ನಾಗಪುರ
ಕೆ. ಎಸ್. ನಾಗೇಂದ್ರ, ಕನಕಪುರ
ಜಿ. ಸೀತಾರಾಮಯ್ಯ, ಮೈಸೂರು
ಎಲ್. ಶಂಕರನಾರಾಯಣರಾವ್, ಕ್ಯಾತ್ಸಂದ್ರ
ಬಿ. ಸಿ. ಸುರೇಶ್
ಎನ್. ಸೀತಾರಾಮ್, ಮೈಸೂರು
ಸಿ. ಆರ್. ಸುಬ್ಬರಾಯಶೆಟ್ಟಿ, ಚ. ರಾ. ಪಟ್ಟಣ
ಎಸ್. ಶೇಷಾಚಲಯ್ಯ, ಅರಕಲಗೂಡು
ಸುಮಿತ್ರಾಬಾಯಿ, ಮೈಸೂರು
ಹೆಚ್. ಡಿ. ಗೋಡ್‌ಕಿಂಡಿ, ಹಿಡಕಲ್
ಪಿ. ಡಿ. ಗಣಪತಿ, ಅಮ್ಮತ್ತಿ
ಹೆಚ್. ಎನ್. ಪ್ರಕಾಶಕೃಷ್ಣ, ಮಂಡ್ಯ
ರಾಘವೇಂದ್ರ ಕುಲ್ಕರ್ಣಿ, ಗುಲ್ಬರ್ಗ
ಜಿ. ಶ್ರೀಧರ, ಕಾರ್ಗಲ್
ಗಣಪಳ್ಳಿ ಕೃಷ್ಣಮೂರ್ತಿ, ಮೇಳಿಗೆ

---

SHANKARA BHAASKARA: A Spiritual & Philosophical Kannada Quarterly Magazine. Edited by Sri K. G. Subraya Sharma, M.A., and Published by Adhyatma Prakasha Karyalaya Public Charitable Trust (R.) Branch: No. 68, 2nd Block, Thyagarajanagar, Bangalore-28; Phone: 2676 55 48. Printed by Sri B. N. Nataraj at Sri Nithyananda Printers, Ashoknagar, Bangalore-50; Phone: 2652 60 27 / 5767 0191. 1-10-2004.

**ಚಿತ್ತಶುದ್ಧಿಪ್ರಭಾವೇಣ ಹ್ಯಾತ್ಮಜ್ಞಾನಸ್ಯ ಚೋದಯಃ।**
**ಚಿತ್ತಶುದ್ಧಿಕರಂ ಪ್ರಾಜ್ಞಂ 'ಶಂಕರಂ ಭಾಸ್ಕರಂ' ಭಜೇ॥**

# ಶಂಕರಬೋಧಾಮೃತ

## ಚಿತ್ತಶುದ್ಧಿಯಿದ್ದರೇ ಜ್ಞಾನೋದಯ

**ಅಸಂಸ್ಕೃತಾತ್ಮಾನಃ ತಪಸಾ ಇಂದ್ರಿಯಜಯೇನ ಚ, ಪ್ರಯತ್ನಂ ಕುರ್ವಂತೋಽಪಿ ಏನಂ ನ ಪಶ್ಯನ್ತಿ॥** ಗೀತಾಭಾಷ್ಯ ೧೫-೧೧

*ತಪಸ್ಸಿನಿಂದಲೂ ಇಂದ್ರಿಯನಿಗ್ರಹದಿಂದಲೂ ಸುಸಂಸ್ಕೃತವಾಗದ ಮನಸ್ಸನ್ನುಳ್ಳವರು ಆತ್ಮಜ್ಞಾನಪ್ರಾಪ್ತಿಗಾಗಿ ಪ್ರಯತ್ನವನ್ನು ಮಾಡುತ್ತಿದ್ದರೂ ಅಂಥವರು ಆತ್ಮನನ್ನು ತಿಳಿಯಲಾರರು.*

ಅನಾತ್ಮವಸ್ತುಗಳನ್ನು ತಿಳಿಯುವುದು ಕಷ್ಟ. ಅದರಲ್ಲೂ ದೂರದಲ್ಲಿರುವಂಥ ಸೂರ್ಯ, ಚಂದ್ರ, ನಕ್ಷತ್ರ, ಗ್ರಹಗಳು, ದೇವತೆಗಳನ್ನು ತಿಳಿಯುವುದಂತೂ ಇನ್ನೂ ತುಂಬಾ ಕಷ್ಟವಾದದ್ದು. ಆದರೆ ಆತ್ಮನನ್ನು ತಿಳಿಯುವುದೆಂದರೆ ತುಂಬಾ ಸುಲಭ, ಇಲ್ಲಿ ಕಷ್ಟವೆಂಬುದು ಇಲ್ಲವೇ ಇಲ್ಲ. ಏಕೆಂದರೆ ಹೆಸರೇ ಹೇಳುವಂತೆ ಇದು ಆತ್ಮ (ತನ್ನ) ಜ್ಞಾನವಲ್ಲವೆ?

ಹೀಗಿದ್ದರೂ ಈ ಆತ್ಮನನ್ನು ಇರುವಂತೆ ಸರಿಯಾಗಿ ಅನುಭವದಿಂದ ತಿಳಿಯಲಾರದೆ ಅನೇಕ ಜನ ಸಾಧಕರು ಕಷ್ಟಪಡುತ್ತಾರೆ. ಅವರೇನು ಪ್ರಯತ್ನವನ್ನು ಮಾಡುತ್ತಿಲ್ಲ ಎಂದು ಹೇಳಬಾರದು. ಸಾಕಷ್ಟು ಪ್ರಯತ್ನವನ್ನು ಚೆನ್ನಾಗಿಯೇ ಮಾಡುತ್ತಿರುತ್ತಾರೆ. ಆದರೂ ಅವರಿಗೆ ಆತ್ಮನ ಸ್ವರೂಪವು ಅರ್ಥವಾಗಿರುವದಿಲ್ಲ. ಇದಕ್ಕೇನು ಕಾರಣ? ಎಂದರೆ, ಇಲ್ಲಿದೆ ಉತ್ತರ:

ಸುಸಂಸ್ಕೃತವಾದ ಮನಸ್ಸು ಇಲ್ಲದಿರುವುದೇ ಕಾರಣ. ಚಿತ್ತಶುದ್ಧಿಯಿಲ್ಲದೇ ಹೋದರೆ ಅಂಥವನಿಗೆ ಆತ್ಮಜ್ಞಾನವುಂಟಾದೀತೆ? ಸುಸಂಸ್ಕೃತವಾದ ಮನಸ್ಸಿಗೇ ಮತ್ತೊಂದು ಹೆಸರು **ಶುದ್ಧಚಿತ್ತ** ಎಂದು. ತಪಸ್ಸಿನಿಂದಲೂ ಶಮದಮಾದಿಸಾಧನಗಳಿಂದಲೂ ಚಿತ್ತಶುದ್ಧಿಯನ್ನು ಮೊದಲು ಸಾಧಕನು ಸಂಪಾದಿಸಿಕೊಳ್ಳಬೇಕು. ಅಂತಃಕರಣದಲ್ಲಿ ರಾಗದ್ವೇಷಗಳು, ಕಾಮ ಕ್ರೋಧಾದಿಗಳು, ಅಹಂಕಾರ ಮಮಕಾರಗಳು—ಇವುಗಳೇ ದೋಷಗಳು ಈ ದೋಷಗಳನ್ನು ತಪಸ್ಸಿನಿಂದ ಕಳೆದುಕೊಂಡವನಿಗೆ ಸದ್ಗುರೂಪದೇಶದಿಂದ ಆತ್ಮಜ್ಞಾನವು ದೊರಕುವುದು ಕಷ್ಟವಾದೀತೆ? ಚಿತ್ತಶುದ್ಧಿಯಿದ್ದವನಿಗೇ ಆತ್ಮಜ್ಞಾನೋದಯವು. ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

---

ಮುದ್ರಕರು: ಶ್ರೀ ನಿತ್ಯಾನಂದ ಪ್ರಿಂಟರ್ಸ್, ಬೆಂಗಳೂರು-50; ✆ 2652 60 27

**SHANKARA BHAASKARA A Kannada Philosophical Quarterly Journal**
**Registered with the Registrar of News Papers for India, New Delhi**
**Under No. 45566/88 dated 23-12-1988**

**ವಂದೇಽಹಂ ಮಾತರಂ ದುರ್ಗಾಂ ಸುವೀರಾಂ ಸಿಂಹವಾಹಿನೀಮ್ ।**
**ಸರ್ವಶತ್ರುವಿನಾಶಾಯ ಧೀರಾಂ ಶೂರಾಂ ಶುಭಪ್ರದಾಮ್ ॥**



**ಅಧ್ಯಾತ್ಮಪ್ರಕಾಶಕಾರ್ಯಾಲಯ ಪಬ್ಲಿಕ್ ಛಾರಿಟಬಲ್ ಟ್ರಸ್ಟ್ (ರಿ.) (ಶಾಖೆ)**
**ತ್ಯಾಗರಾಜನಗರ, ಬೆಂಗಳೂರು-560 028; ದೂರವಾಣಿ: 2676 55 48**